ದೊಳ್ ಕನ್ನೆಯಂ ನೆರೆಯೆ ಕೈಗೆಯ್ಸಲ್ವೇಟ್ಟು ಮನುಷ್ಯವಾಹ್ಯಮಪ್ಪ ಚತುರಂತಯಾನವನೇಱಿಸಿ ಸ್ವಯಂವರಸಭಾ ಭೂಮಿತಳಕ್ಕೆ ಕನ್ನೆಯಂ ಪೋಗಲ್ವೇೞ್ದೊಡಾಕೆ ಬರ್ಪುದು ಮಿರದೋಳಿಯೊಳಂ ಮಂಚಸ್ಥರಾಗಿರ್ದ ರಾಜಕುಮಾರರ್ಕಳೊಳ್—

ಕಂ|| ಶೃಂಗಾರ ಚೇಷ್ಟೆಗಳ್ ವಿವಿ |
ಧಂಗಳ್ ನೆಗೞ್ದುವು ಮಹಾನಿಲಾಹತಿ ವಿವಿಧ ||
ತ್ವಂಗ ತ್ತರಂಗ ಲಹರೀ |
ಭಂಗುರ ಗಂಭೀರ ಜಳಧಿ ವೇಳಾಕೃತಿಯಿಂ || ೯೧ ||

ವ|| ಅಂತು ಚಂದ್ರೋದ್ಗತಿಯಿ ನುಚ್ಚಳಿಸಿದ ಸಮುದ್ರವೇಳೆಯಂತೆ ನೃಪವಾಳಿ ನಿಜಲೀಳೆಯಂ ಮೆಱೆದು ಪರಿಪರಿಯಾಗೆ ಮಂಚ ಮಧ್ಯ ವೀಥಿಯಂ ಕನ್ನೆ ಪುಗುವುದುಂ —

ಕಂ|| ಪ್ರಮದಾಮಿಷಕ್ಕೆ ಮುಸುಱುವ |
ತಿಮಿ ಕುಳದವೊಲ ವನಿಪಾಲ ನಯನ ಚಯಂ ಸಂ||
ಭ್ರಮದಿ ನೊಡ(ನ)ನಿತು ಮಾನೃಪ |
ಕುಮಾರಿಯಂ ಸುತ್ತಿಮುತ್ತಿ ಕೊಳ್ವ ವಸರದೊಳ್ || ೯೨ ||

ವ|| ಒರ್ವಳ್ ವಿಮಾನ ಪರೀತೆ ಗಗನಸ್ಥಳದೊಳ್—

ಉ|| ದೇವತೆ ನಿಂದಿದಂ ನುಡಿವಳಕ್ಕ ನೆಗೞ್ತೆಯ ಪುಷ್ಕರಾರ್ಧದೊಳ್ |
ಭಾವಿಸು ಪೂರ್ವಮಂದರದ ಭಾರತದೊಳ್ ಪುರಮುಂಟು ನಂದನಂ ||
ಭೂವನಿತೇಶ ನಾಳ್ದೊ ನದ ನಲ್ತೆ **ಮಹೇಂದ್ರ** ನೃಪಂ ನೃಪಂಗೆ ಮಾ |
ದೇವಿ ದಲಂತನಂತಮತಿ ತನ್ಮಿಥುನಕ್ಕೆ ಮನಕ್ಕೆ ಸಂತಸಂ || ೯೩ ||

ಕಂ|| ಪುಟ್ಟಿ ದಲಾನುಂ ನೀನುಂ |
ಪುಟ್ಟಿದೆ ವಂದೆನ್ನ ಪೆಸರ **ನಂತಶ್ರೀ** ಶ್ರೀ ||
ಪುಟ್ಟೆ **ಧನಶ್ರೀ** ನಾಮವ |
ನಿಟ್ಟರ್ ನಿನಗಲ್ಲಿ ಪಿರಿಯೆ ನಾಂ ನೀಂ ಕಿಱಯೈ || ೯೪ ||

ವ|| ಆಗಿ ಸುಖ ಮಿರ್ಪಿನ ಮೊಂದುದೆವಸಂ ವಸಂತಸಮಯದೊಳ್ ನಾಮಿರ್ವರುಂ ವನ ವಿಹಾರ ನಿಮಿತ್ತಂಪೋಗಿ:—

ಕಂ|| ಸದ್ಧರ್ಮ ವತ್ಸಳರ್ ಮತಿ |
ಶುದ್ಧತೆ ನಿಲೆ **ನಂದಗುಪ್ತ** ರಿತ್ತೊಡೆ ಸುಖ ಸಂ ||
ವೃದ್ಧಿ ಗುಪವಾಸಮಂ ಕೊಂ |
ಡಿ ದ್ಧಾಂಬುರು ಹಾಸ್ಯೆ ಬೇಱಿ ಸಿದ್ಧಾಚಳದೊಳ್ || ೯೫ ||

ವ|| ಪ್ರೋಷದ ವ್ರತ ಪವಿತ್ರ ಗಾತ್ರೆಯರ ಮಾಗಿ ಮತ್ತಮಲ್ಲಿಯೆ ಕಿಕ್ಕಿಱಿಗಿಱಿದು ಬೆಳೆದಡರೆ ಕೊಳೆ ಪೂತ ಚೂತವನಮೆ ಬಾೞ್ತೀಲಿಯಾಗೆ ಪೊಪರ್ತಗುಳ್ದು ಕವಲ್ತೆಳವಳಿಸುವ ಲಸದಶೋಕೋ ದ್ಯಾನ ಮಧ್ಯದೊಳ್ ನಾಲ್ಕುಂ ರಕ್ತಾಶೋಕಂಗಳ ನಡುವಣದೊಳ್—

ಕಂ|| ಲಲಿತ ಲತಾಮೃದು ಶಾಖಾ |
ವಲಿ ಮಿಳಿ ಯಾಗೊರ್ವರೊರ್ವರಂ ತೂಗಿ ಲತಾ ||
ಲಲಿತೇ ನಾ ವಿರ್ವರು ಮು |
ಯ್ಯಲಾಡೆ ಮನ ಮುಯ್ಯಲಾಡೆ ಖೇಚರ ನೊರ್ವಂ ||೯೬ ||

ವ|| ತ್ರಿಪುರ ಪರೀಶ್ವರಂ **ವಜ್ರಾಂಗ** ನೆಂಬೊಂ ಪಿಡಿದೆಟಿಿದುಕೊಂಡು ಗಗನತಳಕೆ ನೆಗೆವುದು ಮಾತನ ಪ್ರಾಣೇಶ್ವರಿ **ವಜ್ರಮಾಳಿನಿ** ಕಂಡು ಪುರುಡು ಮಟಿಲು ಮೊಡವಳಿಯೆ ನಿಶಿತಾಸಿಧೇನುವಂ ಕಿಬ್ಬಿ ಬೆನ್ನಟ್ಟಿ ಮುಟ್ಟಿ ಬೆಜಗಿಲ್ಲದಾತನ ಜೆನ್ನಂ ಜನ್ನಿವರವಿಕ್ಕಿದಂತಿರೆ ಪೊಯ್ಯೆ ನೊಂದು ನಿತ್ತರಿಸ ಲಾಜದೆ ಘೋಂಕನೆ ಬಿಟ್ಟು ತಾಂ ಮಹೀತಳಕೆ ಬೀಟುತ್ತುಂ ನಮ್ಮ ನೋವಿಂಗಾಜದೆ ಪರ್ಣಲಘು ವೆಂಬ ವಿದ್ಯೆಯಂ ಬೆಸಸುವುದು ಮಾ ವಿದ್ಯಾದೇವತೆ—

ಕಂ|| ಜನನಿ ನಿಜೋತ್ಸಂಗದೊ ಳೊ |
ಯ್ಯನೆ ತಂದಿರಿಸುವ ಪೊಲಿಕ್ಕೆ ತೊಡೆಯೊಳ್ ಬಱಯಂ ||
ಮನ ಮೊಸೆ ದಿಕ್ಕಿರ್ದ ಸುಖಾ |
ಸನದೊಳ್ ಕುಳ್ಳಿರಿಸುವಂತೆ ಸಿಕತಿಳ ತಳದೊಳ್ || ೯೭ ||

ವ|| ಆ ಭೀಮಾಟವೀಸರಸ್ತೀರದೊ ಳಿಿಸಿ ಪೋಪುದುಂ ನಾ ಮಲ್ಲಿ ಧೈರ್ಯಮನೆ ಮನದೊಳವ ಳಂಬಿಸಿ ಚತುರ್ವಿಧಾಹಾರ ಶರೀರಪ್ರತ್ಯಾಖ್ಯಾನ ಪೂರ್ವಕಂ ಸನ್ಯಸನದಿಂ ಮುಡಿಪ್ಪಿಸೌಧರ್ಮೇಂದ್ರಂ ಗಾಂ **ನವಮಿಕೆ** ಯೆಂಬ ದೇವಿಯೆ ನಾದೆಂ,ನೀನುಂ **ಕುಬೇರಂಗೆ ರತಿ**ಯೆಂಬ ಮನೋವಲ್ಲಭೆಯಾದೈ. ಇಂತಿರ್ವರು ಮೊರ್ಮೆ **ನಂದೀಶ್ವರ** ದ್ವೀಪದೊ ಳೋರ್ಒರ್ವರಂ ಕಂಡು ಅಱದೊಡನೆ ಜಿನೇಂದ್ರ ಮಹಿಮೆಯಂ ಮಾಡಿ ಮನುಷ್ಯಲೋಕದೊಳ್ ನಮ್ಮೊಳಾರಾದೊಡ ಮೊಂದೊರ್ವರಂ ಪ್ರತಿಬೋಧಿಸು ವಂತು ಪೂಣ್ದು ಪೋದೆ ವದಂ ನೀನೀಗಳ್:—

ಕಂ|| ಮಱಿದು ಟಾದೀ ಸಂಸಾರಮ |
ನಱಯದ ರಂತೇ ನುಮಲ್ಲ ದಲ್ಪಸುಖಕ್ಕಂ ||
ತೆಱಗಿ ಮರುಳಕ್ಕ ಕನಸಿನ |
ತೊಱೆಯೊಳ್ ನೀರ್ಗುಡಿದು ತಣಿವ ನಱಸಿದ ರೊಳರೇ || ೯೮ ||

ವ|| ಅದಱಂ ದೆನ್ನನುಡಿ ಯೆಂಬುದು ನಿನಗೆ ಪರಿಪಾಕ ಪಥ್ಯ ಮಿದ ನವಜ್ಞೆಗೆಯ್ವುದುಂ ನಿರಾ ಕರಿಸುವುದುಂ ಕಿಂಪಾಕಪರಿಪಾಕ ನೀಕಾಶ ವಿಷಾಮೊರೆಯ ಪರಿಗ್ರಹಭಾರದಿಂ ಮುಬುಗಲ್ಕಲ್ಲದೆಂದಿಂಗಂ ನೆಗೆಯಲ್ಕಕ್ಕುಮೆ? ಮೇಗಪ್ಪುದಂ ನೀನಱವೆ ಯೆಂದು ಮಾಣ್ಬುದು ಮದೆಲ್ಲಮುಮ ನೆಯ್ದೆ ಕೇಳ್ದು ತದ್ದೇವೀರೂಪಮುಂ ಕಂಡು:—

ಕಂ|| ಅಱವ ನೆಡೆವಱದು ಕೆಟ್ಟುದ |
ನಱಸಲ್ ಪೋಪಂತೆ ಮುಚ್ಚೆವೋಪುದು ಮೊಡ ನಿ ||
ರ್ದಱಕೆಯ ಪರಿಜನ ಮಿರದೆ |
ಬ್ಬಱಸಲೊಡಂ **ಸುನುತಿ** ಮುಚ್ಚೆಯಿಂ ದೆಟ್ಟುತ್ತಳ್ || ೯೯ ||

ವ|| ಅಂತು ಮುಚ್ಚೆಯಿಂ ದೆಚ್ಚತ್ತು ಸುಮತಿ ತಮ್ಮಕ್ಕ ನನಂತಶ್ರೀ ಯಪ್ಪ ದೇವಿಗಿಂತೆಂದಳ್—

ಚಂ|| ಅನುಭವಿಸುತ್ತು ಮಿರ್ದು ಸುಖದಿಂ ಸುಖಮಂ ಸುರಲೋಕದೊಳ್ ಪುರಾ |
ತನ ಭವ ನೋಹದಿಂ ದನುಜೆ ಯೆಂದೆನ ಗಿಷ್ಟಮತಿ ಪ್ರಕಾಶಮಂ ||
ಜನಯಿಪ ನಿನ್ನದೊಂದು ದಯೆಗೇಂ ತೊದಲಿಕ್ಕ ಮಹಾಪ್ರಸಾದಮಾ |
ಜಿನ ಮತಮಂ ಭವನ್ಮತಮುಮಂ ಮಱದಿಂ ದವಿವೇಕಿ ಯಪ್ಪೆನೇ || ೧೦೦ ||

ಕಂ|| ಇದು ಭವದ ಮಳಿನ ಸೌಹಾ |
ರ್ದ್ರದುದಯ ಮಲ್ಲದೆ ಮದೀಯ ಮಹಿಮೋನ್ನತಿಯು ||
ಲ್ತದ ನಱದೆಂ ಮಾರ್ಗಂ ದ |
ಪ್ಪಿದ ಕುರುಡರ ನಱದ ಬಟ್ಟೆ ಗುಯ್ಪರೆ ಪಿರಿಯರ್ || ೧೦೧ ||

ವ|| ಅದಱಂದ ಮೆಮಗೆ ನಿಮ್ಮ ನುಡಿ ಮರ್ದಿನ ಕೈಸೆಯಂತುಟೆ, ಮತ್ತ ಮಾತುರ ನೌಷಧ ಭೀರುವಾದೊಡಂ ಭಿಷಗ್ದೋಷ ಮಾಗದಂತೆ ನಿಮ್ಮ ಪೇಟ್ದುದ ನುಪೇಕ್ಷಿಸಿದೊಡೆನ್ನ ದೋಷಂ, ಪುನ ರ್ದರ್ಶನಂ ಯಥಾಸ್ಥಾನಕ್ಕೆ ಬಿಜಯಂ ಗೆಯ್ಯಿ, ಮೆಂದು ಮುಕುಳಿತ ಕರಕಮಳೆ ವಿಸರ್ಜಿಸುವುದು ಮಾದೇವಿ—

ಕಂ|| ಗಗನಂ ನಿಜಭೂಷಣ ದೀ |
ಪ್ತಿಗಳಿಂ ತಲಿತಲಿಸಿ ಪೊಳೆಯೆ ಮಿಂಚಿನ ಗೊಂಚಲ್ |
ನೆಗೆದಂತೆ ನೆಗೆದು ಸುರ ಲೋ |
ಕ ಗಮನಮಂ ಮನುಜ ಲೋಕದಿಂ ಪೊಗಲಿಸಿದಳ್ || ೧೦೨ ||

ವ|| ಇತ್ತ ಸುಮತಿ ಸುಮತಿವೆಸರಂ ನನ್ನಿಮಾಡಿ ತನ್ನ ಸಖೀಜನಕ್ಕಿಂತೆಂದಳ್, ಪರಮಾರ್ಥಮಂ ಮಧ್ಯಸ್ಥತೆಯುಮ ನಧರಿಸದವಧಾರಿಸುವಾಗಳ್ ದೇವತೆಯ ನುಡಿದ ನುಡಿ ಸಾರ ಮಸಾರಂ, ಉಪಾದೇಯ ಮನಾದೇಯ, ಮೆಂಬಿನಿತಂ ನಿಮಗಱಯಲಕ್ಕುಮೆ ವಲಂ ವಿಷಯಾಸಕ್ತಿಯೊಳಾಯಾಸೈಕ ನಿರತರಾಗಿರ್ಪ ಪ್ರಾಕೃತ ಜನಂಗಳ ಗಮನಮೇ ಸಮಸ್ತ ವೇದಿಗೆ ಹೃದಯಂಗಮ ಮಾಗ ದದುಮಂ ನೀಮೆ ಪೇಟ ಮೆಂದವರೊಳ್ ಪರೀಕ್ಷಾಕ್ಷಮೋದಾರ ವೀರ ವಾಕ್ಯಂಗಳಂ ನುಡಿಯುತ್ತುಂ ರಥಮಂ ಮಗುಲಿಲ್ವೇಲ್ದು—

ಕಂ|| ಕಾಂತಾರತ್ನಮ ನೆಮಗ |
ಪ್ಪಂತಾಗಿರೆ ಮಾಟ್ಪಿ ವೆಂದು ನೆರೆದ ಮಹೀಭೃ ||
ತ್ಸಂತತಿಯ ಬಿಟ್ಟವಾಯ್ ಬಿ |
ಟ್ಟಂತಿರೆ ಬಂದಾಕೆ ಪೊಕ್ಕ ಳಿರ ದರಮನೆಯಂ || ೧೦೩ ||

ಉ|| ಪೊಕ್ಕು ನಿಜಾಂಬಿಕಾ ಜನಕರಂ ಸುತೆ ಬೀೞ್ಕೊಳೆ ಕನ್ನೆ ಮುನ್ನೆ ತ |
ತ್ಪಕ್ಕತಿಲೌಲ್ಯ ಬಾಲ್ಯದೊಳ ಮಾಗದು ಮಾಣಿಸಲೆಂಬ ಚಿಂತೆಯಿಂ ||
ಚಿಕ್ಕಸರಾಗಿ ನಮ್ಮ ಳಿಪೆ ಸಾಲದೆ ಭವ್ಯರ ನಾರ್ಗೆ ಬಾರಿಸಲ್ |
ಬಕ್ಕರ್ ಮೆನು ತ್ತಣಂ ಮಿಡುಕ ರಕ್ಕಟ ಲೆಪ್ಪದ ರೂಪಿದೆಂಬಿನಂ || ೧೦೪ ||

**ವ||** ಬಿಲ್ಲುಂ ಬೆಱಗುವಡಾಗಿರ್ದ ಜೈನ ಶಾಸನ ಚೂಡಾಮಣಿಯುಂ ವಿಜಯೆಯುಂ "ಮೆಮ್ಮ ವಂಶಕ್ಕೀಕೆಯೆ ಪತಾಕೆ" ಯೆಂದಭಿವರ್ಣಿಸಿ ಪುತ್ರೀವಿಯೋಗ ವಿಷಾದಮುಂ, ತತ್ತಪೋಗ್ರಹಣ ಪ್ರಮೋದಮುಂ ಸೂೞ್ಸೂೞೊಳ್ ಪೆರ್ಚೆ ಬಂದೊಱೆದುಗುವ ಶೋಕಬಾಷ್ಪಂಗಳುಮಾನಂದಾಶ್ರುಜಲಂಗಳುಮಂ ತೊಳೆದು ಮಗಳ ಮೊಗಮನತಿಸ್ನೇಹ ಪಾಶಾಳಂಬಿತ ಮನಸ್ಕರಾಗಿ ನೋಡಿ—

ಕಂ|| ತನಯೆ ತಪದಿಂದೆ ನೀಂ ನಿ |
ನ್ನನೆ ಯಲ್ಲದೆ ನಮ್ಮ ಕುಲಮುಮಂ ಬೆಳಗಿದೆ ಯೆಂ ||
ತೆನೆ ಮುಗಿಲ ಮುತ್ತು ಮುಗಿಲಂ |
ನೆನೆಯಿಸಿ ಮಂಡಲಿಯ ನಿಪುಣರಿಂ ಪೊಗೞಿಸದೇ || ೧೦೫ ||

**ವ||** ಎಂದು ಗಂಭೀರ ಧೀರೋದಾರ ಸಾರೋಕ್ತಿಗಳಿಂ ನುಡಿದೊಡಂಬಟ್ಟ ತಾಯುಂ ತಂದೆಯುಮಂ ಬಿಡಿಸಿ ತಪಸುಗಮ್ಯಮಾನೆ ರಾಜಮಂದಿರದಿಂ ಪೊಱಮಟ್ಟು **ಸುಮತಿ** ಸುವ್ರತಾಗಣಿನೀ ಸಮಕ್ಷದೊಳ್ ಪರಮ ದೀಕ್ಷೆಯ ನಯ್ನೂರ್ವರ್ ಮಹೀಪಾಲ ಕನ್ನೆಯರೊಡನೆ ಕೆಯ್ಕೊಂಡಳ್—

ಕಂ|| ಮತ್ತಿತ್ತ ಚಕ್ರಿಯುಂ ಚತು |
ರುತ್ತರನವದಶೀತಿ ಲಕ್ಷಪೂರ್ವಂ ಬೞ್ದು ||
ತ್ಯುತ್ತಮ ಸುಖಿ ಪವಡಿಸಿ ತ |
ನ್ನುತ್ತರ್ಯ ದುಕೂಲ ವಿಶದ ಶಯ್ಯಾತಳದೊಳ್ || ೧೦೬ ||

ಇರೆ ಛಿದ್ರಿಸಿದೊಂ ಜವ ನನು |
ವರಕ್ಕ ಮಿದಿರ್ಗಂ ಪೊಣರ್ಕೆಗಂ ಸುಗಿದವೊಲಾ ||
ಹರಿಯಂ ಮೂದಲಿಸಿ ಚಲಂ |
ಬೆರಸಿ ನಿರಾಕರಿಸಿ ಹರಿಯ ನಿಱುವುದು ಮೊಗ್ಗೇ || ೧೦೭ ||

**ವ||** ಅಂತನಂತವೀರ್ಯಂ ಭವಾಂತರಿತ ನಪ್ಪುದುಂ—

ಮ|| ಬಲದೇವಂ ಬಲದೇವ ಸುಜ್ಜವಣೆಯೊಳ್ ಮುಂದಾವರಂ ಕೊಂದ ಮೆ |
ಯ್ಗಲಿ ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತೞ್ತಿಂದುಮಂ ಬಳ್ಳಿ ಸಂ ||
ಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹಶೃಂ |
ಖಲೆ ಪಾಱಿಕೀೞಿ ತಪೋವನಕ್ಕೆ ತಳರ್ದಾತ್ಮೀಯಾನ್ವಯೈಶ್ವರ್ಯದೊಳ್ || ೧೦೮ ||

**ವ|| ಅರಿಂಜಯ**ನೆಂಬೊಂ ತನ್ನ ಕಿಱಿಯ ಮಗನ ನಭಿಷೇಕ ಪೂರ್ವಕಂ ನಿಱಿಸಿ ಸಪ್ತ ಶತ ಕ್ಷಿತಿಪಾಲ ಸಮನ್ವಿತಂ ಸ್ವಯಂಪ್ರಭ ತೀರ್ಥೇಶ್ವರ ಪಾದಾರವಿಂದ ಸಮಕ್ಷದೊಳ್ ಜಿನನಾಥ ರೂಪಮಂ ತಾಳ್ದಿ—

ಕಂ|| ಧೀರತೆ ಗಿಡದೆ ಪರೀಷಹ |
ವೀರರ ನುಗ್ರೋಗ್ರ ತಪದೊಳಂ ಗೆಲ್ದು ತಮೋ ||
ವೈರಿ ವಿಜಯಕ್ಕೆ ಮಸೆದಸಿ |
ಧಾರೆವೊಲಪರಾಜಿತಂ ವಿರಾಜಿತ ನಾದಂ || ೧೦೯ ||

**ವ||** ಅಂತು ತಪೋನಿಯಮದೊಳವಾ ಜಿನಚಂದ್ರ ಮುನೀಂದ್ರಂ ಯೋಗೀಂದ್ರ ಚಂದ್ರರಿಂ ಪೊಗೞಿಸಿ ನಿರಾಕುಳ ನೇಕವಿಹಾರಿಯಾದೊ ನನಂತವೀರ್ಯನುಂ **ರತ್ನಪ್ರಭೆಯುಂ ಘರ್ಮೆ**ಯು ಮೆಂಬ ಮೊದಲ ನರಕದ ಪದಿಮೂಱಿಂದ್ರಕಂಗಳೊಳ್ **ಸೀಮಂತ** ಮೆಂಬ ಮೊದಲಿಂದ್ರಕದೊಳ್ ನಾಲ್ವತ್ತಿರ್ಛಾಸಿರ ಸಂವತ್ಸರ ಮಾಯುಷ್ಯಮಾಗಿ ಪುಟ್ಟಿದ ನಿತ್ತಲ್ ಉರ್ವರಾಸ್ಯ ತಿಲಕನಪ್ಪ ತಪೋ ಧನನುಂ ಸಿದ್ಧಗಿರಿಯೊಳಾತ್ಮಪರ ನಿರಾಪೇಕ್ಷಮಪ್ಪ—

ಕಂ|| ಪ್ರಾಯೋಪಗಮನದಿಂ ಮುನಿ |
ನಾಯಕ ನಿರದರಿದು ತೊಱೆದು ನಿಜತನುವ ನಯ ||
ಶ್ರೀಯ ಬೆಳಗೆನಿಸು ವಮರ |
ಶ್ರೀಯೊಳ್ ನೆಗೞ್ದಚ್ಯುತೇಂದ್ರ ಪದಮಂ ಪಡೆದಂ || ೧೧೦ ||

**ವ||** ಅಂತು—

ನೆರೆದಿರ್ದ ಮೆಂತು ಮೂಱಂ |
ಕುರಂಗ ಳೊಳಗೊಂ ದಧೋಗ ನೊಂದೂರ್ಧ್ವಗ ಮಂ ||
ತಿರೆ ವಾಸುದೇವ ಬಲದೇ |
ವರೊ ಳೊರ್ವ ನಧೋಗ ನೊರ್ವ ನೂರ್ಧ್ವಗ ನಾದೊಂ || ೧೧೧ ||

**ವ||** ಅಚ್ಯುತೇಂದ್ರಂ ಮೂನೂಱಯ್ವತ್ತು ಸವಿಾಚೀನ ವಿಮಾನಂಗಳುಂ ಮೂವತ್ತುಮೂವರ್ ದಿವಿಜರುಂ, ಪಯಿಂಛಾಸಿರ್ವರ್ ಸಾಮಾನಿಕಾಮರರುಂ, ನಾಲ್ವತ್ತುಸಾಸಿರ್ವರಂಗ ರಕ್ಷಕ ದೇವರುಂ, ನಾಲ್ವರ್ ಲೋಕಪಾಲರುಂ, ಗಜ ತುರಗ ರಥ ಪದಾತಿ ಮಹೋಕ್ಷ ಗಂಧರ್ವ ನಟೀ ವಿಕಲ್ಪಿತ ಮಾದೇೞುಂ ಪಡೆಯು ಮೊಳಗಣ ನಡುವಣ ಪೊಱಗಣ ಮೂಱುಸಭೆಯುಂ, ಮೂವತ್ತಿರ್ವರ್ಪ್ರಧಾನ ದೇವಿಯರುಂ, ಅಱುವತ್ತು ಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧ ಮಾಗೆ—

ಕಂ|| ದೊರೆಯೆನೆ ಮಾದೇವಿಯರಿ |
ಪ್ಪರಾಗೆ ತಣಿದಂ ಮನಃಪ್ರವೀಚಾರಂ ತ ||
ತ್ಸುರಪತಿ ಸುರಲೋಕ ಸುಖಾಂ |
ಬುರಾಶಿಯೊಳ್ ಕೂಡಿ ಮಾಡುತುಂ ಮುೞುಗುತ್ತಂ || ೧೧೨ ||

ನಿಕರಣ ಸಂಭವ ದೇವೀ |
ನಿಕರಮು ಮಚ್ಚರಸೆಯರ್ ಪಲರ್ ತದ್ದೇವೀ ||
ಪ್ರಕರ ಕ್ಕಳವಿಯ ನಹಿನಾ |
ಯಕ ನಱಿಯಂ ಪೇೞ ಲುೞಿದ ನವ ನೆತ್ತಱಿಪೊಂ || ೧೧೩ ||

ಸುರ ನಿಪ್ಪತ್ತಿರ್ಛಾಸಿರ |
ಬರಿಸಕ್ಕೊರ್ಮೆ ನೆನೆವ ನುಣಿಸಂ ಮಾಸಾಂ ||
ತರಿತ ಮೆನಿಪೊಂದು ಸಂವ |
ತ್ಸರಕ್ಕೆ ಸುಯ್ವ್ವಂ ನಮೋರು ಸೌರಭ ನಿಭಮಂ || ೧೧೪ ||

ಪರಮ ಸುಖಾಮೃತ ಪಿಂಡದ |
ದೊರೆ ಮೂಱು ಮೊಟಂ ಶರೀರ ಮಾಗಿಪ್ಪ ||
ತ್ತಿರಡೆ ಸಮುದ್ರೋಪಮ ವ |
ತ್ಸರಂ ಬರಂ ಬಾಳ್ಗು ಮಚ್ಯುತೇಂದ್ರಂ ದಿವದೊಳ್ || ೧೧೫ ||

**ವ||** ಅಂತು ದಿವ್ಯ ಸುಖ ಪರಂಪರಾ ಪರೀತಾಂಗ ನನಂಗ ರಾಗರಸಪೂರ ಪರಿಪ್ಲಾ ವಿತಾಂತರಂಗ ನಚ್ಯುತಾಮರೇಶ್ವರಂ **ನಂದೀಶ್ವರ** ದ್ವೀಪಕ್ಕೆ ಪರಿವಾರಾ ಮರೇಶ್ವರರ್ ಸಹಿತಂ ಪೋಗಿ ಜಗತ್ತ್ರಿತಯ ಚೂಡಾಮಣಿಗಂ ಜನದಧಿಮುಖಾದಿ ನಗಾಕೃತ್ರಿಮ ಚೈತ್ಯಾಲಯಂಗಳೊ ಳಷ್ಟಾಹ್ನಿಕ ಮಹಾಮಹಿಮೆಯಂ ಮಾಡಿ ಬಂದೊಂದು ದಿವಸಂ—

ಮ|| ಅಮರಾನೀಕದ ಸುತ್ತು ಪೋಲೆ ದಿನನಾಥಾವಂಧ್ಯ ಸಂಧ್ಯಾಭ್ರವಿ |
ಭ್ರಮಮಂ ವಾಹನ ದೇವ ದಂತಿ ಶಿರದೊಳ್ ಕೂರಂಕುಸಂ ಚಾರಣ ||
ಕ್ರಮದಿಂದಾ ದಱುವತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ ಮೇಲಪ್ಪಕೃ |
ತ್ರಿಮ ಚೈತ್ಯಾಲಯ ವಂದನಕ್ಕೆ ನಡೆದಂ ಸೌಜನ್ಯ ಕಂದಾಂಕುರಂ || ೧೧೬ ||

— **ಗದ್ಯ** —

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮು ಮಪ್ಪ

**ಪುರಾಣಚೂಡಾಮಣಿಯೊಳ್**

ಚತುರ್ಥಾಶ್ವಾಸಂ.

---

|| ಶ್ರೀ ||

# ಶಾಂತಿಪುರಾಣಂ.

**ಪಂಚಮಾಶ್ವಾಸಂ.**

ಕಂ|| ಶ್ರೀ ಜಿನಚಂದ್ರಂ ವಿಬುಧಸ |
ಮಾಜಂ ಬೆರಸಂದು ವಂದನಾ ಭಕ್ತಿಯೊಳೇಂ ||
ರಾಜಿಸಿದನೊ ಗಮನದೊಳಪ |
ರಾಜಿತಚರ ನಚ್ಯುತೇಂದ್ರ ನಪಗತ ತಂದ್ರಂ || ೧ ||

**ವ||** ಬಂದು ಜಂಬೂದ್ವೀಪದ:—

ಉ|| ಮಂದರಶೈಲಮುಂ ದಿವಿಜನಾಯಕ ನೆಯ್ತರೆ ಭದ್ರಶಾಲದಿಂ |
ಸಂಧಿಸಿ ನಿಂದ ನಂದನದಿ ನೊಪ್ಪುವ ಸೌಮನ ಸಾಖ್ಯದಿಂ ಮನೋ ||
ನಂದನ ಮಪ್ಪ ಪಾಂಡುಕದಿ ನಾ ಗಿರಿರಾಜವಿಲಾಸ ಮುಟ್ಟಿಯಂ |
ತಂದುದು ಕಾಣ್ಕೆಯಂ ತನಗೆ ತಪ್ಪವೊ ಲಂತದ ನಿಂದ್ರ ನೆಯ್ದಿದಂ || ೨ ||

**ವ||** ಎಯ್ದಿ ಕ್ರಮದೊಳ್ ಮುಂ ಪೇಟ್ದ ನಾಲ್ಕುಂ ಬನಂಗಳೊಳಗೆ ನಾಲ್ಕು ನಾಲ್ಕಾಗೆ:—

ಕಂ|| ಬೇಱೊರ್ದು ವಿರಾಜಿತ ಪದಿ |
ನಾಱು ಮಕೃತ್ರಿಮ ಜಿನಾಲಯಂಗಳ್ಗೆ ಮನಂ ||
ಬೇಱಿ ನುಡಿ ಬೇಱಿ ಕಾಯಂ |
ಬೇಱಿನಿಸದೆ ಕರಣಶುದ್ಧಿಯಿಂ ಪೊಡವಟ್ಟಂ || ೩ ||

**ವ||** ಅಂತು ದೂರದೊಳ್ ಪೊಡೆವಟ್ಟೆಯ್ದೆ ವಂದು ಬಲಗೊಂಡೊಳಗಂ ಪೊಕ್ಕು ಕ್ರಿಯಾಪೂರ್ವಕದಿಂ ದೇವರಂ:—

ಕಂ|| ಬಂದಿಸಿ ಬಱಿಕೆ ಯಥಾಕ್ರಮ |
ದಿಂ ದಮಳಾರ್ಚನೆಗಳಿಂದ ಮರ್ಚಿಸಿ ಪರಮಾ ||
ನಂದಂ ಕಡೆಯ ಜಿನೇಶ್ವರ |
ಮಂದಿರದೊಳ್ ಕಂಡ ನೊರ್ವ ನಂಬರ ಚರನಂ || ೪ ||

**ವ||** ಕಂಡು:—

ಕಂ|| ಬಗೆ ಬೆಚ್ಚು ನಟ್ಟ ದಿಟ್ಟಿಯ |
ನುಗಿಯಲ್ಕಂ ಬಗೆಯ ತಾಱದೆ ವಿದ್ಧಂ. ||
........................................... |
........ಬರೆದಂಬರ ಚರೇಂದ್ರ ನಿರ್ಪಂತಿರ್ದಂ || ೫ ||

ವ|| ಅಂತು ಭಾವಾನುಬಂಧ ನಿಜಮೋಹದಿ ನಿರ್ಜರು ಮೋರ್ಮೊರ್ವರಂ:—

ಉ|| ಸಂತಸದಂತ ನೆಯ್ದಿ ನಡೆ ನೋಡುವುದುಂ ಖಚರೇಂದ್ರ ನೆಂದ ನೆ |
ನ್ನಂ ತವೆ ಪುಣ್ಯಮೂರ್ತಿಯುತನೈ ಪರಮೇಶ್ವರ ನೀನು ಮಿಂತು ನೋ |
ಟ್ಪಿಂತಿರೆ ನೋಂತನೇ ಮನುಜ ಕೀಟಕನೊಳ್ ನಿನಗೆ ನ್ನೊಳಾವುದ |
ತ್ಯಂತ ಮನೋಹರಂ ಸಕಳನಾಕಿನಿಕಾಯಸಭಾಭಿವಂದಿತಾ || ೬ ||

ವ|| ಎಂದತಿಭವ ಸೌಧರ್ಮಿಕೆಯ ಕೂರ್ಮೆಯ ಭರದಿಂ ದೆಜಗುವಂತೆಜಗಿ ಪೊಡವಡುವುದುಂ:-

ಕಂ|| ದೇವೇಂದ್ರನು ಮಾಗಳ್ ದೇ |
ಶಾವಧಿಯಿಂ ಚಿತ್ತದೊಳ್ ಪ್ರಯೋಗಿಸಿ ನಿಜ ಜ |
ನ್ಮಾವಳಿ ಸಮೇತ ಮಾತ್ಮೀ |
ಭಾವಮ ನಜಿದಂ ವ್ಯತೀ [ತ] ಭವಸಂತತಿಯಂ || ೭ ||

ವ|| ಅಂತು ಭವಾಳಿಯ ನೋಳಿಯೆ ಪೂರ್ವಾಪರ ಪರಾಮರ್ಶಂ ಗೆಯ್ದು:—

ಕಂ|| ಕಂಡು ದಿವಿಜೇಶ್ವರಂ ಬಗೆ |
ಗೊಂಡಿರೆ ನುಡಿದಂ ವಿಯಚ್ಚರಂ ಮುಂ ನಿನ್ನಂ ||
ಕಂಡಜಾಯದೆಯುಂ ಸ್ವಾಮಿ |
ಕಂಡಂತಾದವುದಖಂಡಿತ ವ್ಯಾಮೋಹಂ || ೮ ||

ನಿನ್ನ ದಯೆವೆರಸು ನೋಟ್ಪಿ ಮ |
ಹೋನ್ನತಿಯುಂ ಸತ್ತ್ವಸಾಮಮುಂ ಕಿಜುಕುಳ ನ |
ಪ್ಪೆನ್ನೊಂದಿಗನೊಳನುಚಿತ ಮಿ |
ಮ ನಿಮ್ಮಡಿ ಬೆಸಸಿ ಕಳೆಯ ಮತ್ಸಂಶಯಮುಮಂ || ೯ ||

ವ|| ಆವಜಾ ನವಧಿಜೋಥಲೋಚನ ನಪ್ಪ ನಿನಗೆ ಗೋಚರ ಮಲ್ಲಮದೊಂದು ಮಿಲ್ಲ. ರೂಪ ದರ್ಶನಮಾತ್ರದೊಳೆಲ್ಲಂ ವ್ಯಕ್ತಮಕ್ಕುಂ. ಮತ್ಪ್ರೇಮಾನುಬಂಧ ಕಾರಣಮುಮಂ ಭವದ್ದಯಾ ವಿಶೇಷೋದಯ ನಿಮಿತ್ತಮುಮಂ ಕೇಳಲಟ್ಟಿ ಯಾದಪುದೆನೆ:—

ಕಂ|| ಪದವಪ್ಪದೆಯುಂ ಬಗೆ ಬೆದ |
ರದೆಯುಂ ಕತೆ ಕಿಡದೆಯುಂ ಭವಾವಳಿ ತಡಮಾ ||
ಗದೆಯುಂ ಸವಿ ತವದೆಯು ಮಂ |
ಬುದ ನಿನದ ನತಂದ್ರನಿಂದ್ರನಾ ಜಿನ ಚಂದ್ರಂ || ೧೦ ||

ವ|| ಇಂತೆಂದ ನೀ ಜಂಬೂದ್ವೀಪದ ಭರತಕ್ಷೇತ್ರದೊ ಳುಂಟು:—

ಮ|| ವಿಜಯಾರ್ಧಂ ಗಿರಿಚಕ್ರವರ್ತಿ ವಿಜಯ ಪ್ರಾರಂಭದಿಂ ಗೆಯ್ವ ದಿ |
ಗ್ವಿಜಯಾರ್ಧಂ ತನಗಿಕ್ಕೆಯಾಗೆ ಪೆಸರಂ ಪೋಲ್ತಿರ್ದು ದಂಭೋಧಿ ಯು ||
ಗ್ಮ ಜಲಕ್ಷಾಳಿತಪಾದ ಮಲ್ಲಿ ದೊರೆವೆತ್ತಾ ದಕ್ಷಿಣ ಶ್ರೇಣಿಯೊಳ್ |
ತ್ರಿಜಗತ್ಸಾರತರಂ ವಿಯಚ್ಚರಪುರಂ ಚೆಲ್ವಿಂದಮಾಗ್ಗೋಚರಂ || ೧೧ ||

ಕಂ|| ವಿವಿಧ ವಿಯಚ್ಚರ ರಥಿನೀ |
ನಿವಹ ರಥ ಪ್ರತತಿ ತನಗೆ ನೂಪುರ ಮಾಗೊ ||
ಪ್ಪುವುದೆನೆ ರಥನೂಪುರ ಚ |
ಕ್ರವಾಳ ಮೆಳೆಗವಯವಂಬೊ ಲತಿರಮಣೀಯಂ || ೧೨ ||

ವ|| ಅದ ನಾಳ್ವೊಂ ಜ್ವಳನಜಟಿಯೆಂಬೊಂ ವಿದ್ಯಾಧರರಾಜ ನಾತಂಗೆ:—

ಮ|| ಕುಲವಿದ್ಯಾದಿ ನಿಜಾನ್ವಯ ಪ್ರಕೃತಿಯೊಳ್ ತಜ್ಜಾತಿ ವಿದ್ಯೋತ್ಕರಂ |
ಕುಲವೆಣ್ಣೊಳ್ ವಿಧಿಪೂರ್ವ ಸಾಧಿತ ಮಹಾಮಂತ್ರ ವ್ರಜಂ ತನ್ನ ತೋ ||
ಳ್ವಲದಿಂ ಪೆರ್ಚಿಸಿ ಕೊಂಡಿಳಾಲಲನೆಯೊಳ್ ಮೇಗಿಂಗ ಮೆಕ್ಕೆಕ್ಕೆಗಂ |
ಚಲಕಂ ಗೆಯ್ವವೊಲಂಜಿ ಬೆರ್ಚಿ ಬೆಸಕೆಯ್ದಿರ್ದರ್ಗಂ ಮನಂಗೊಂಡುಪೋ || ೧೩ ||

ಕಂ|| ಅವನೀ ವಧುಗಂ ಶ್ರೀಗಂ |
ಸವತಿ ಯೆನಲ್ ಜ್ವಳನಜಟಿಗೆ ಮಾದೇವಿ ಮನೋ ||
ಭವನ ನನೆಗಣೆಗೆ ದೊಣೆ ವಾ |
ಯುವೇಗೆ ಸುರಗಗನಚರನರಸ್ತ್ರೀರತ್ನಂ || ೧೪ ||

ವ|| ಅಂತಾವಿಯಚ್ಚರೇಶ್ವರ ದಂಪತಿಗೆ ಸಮಸಂದ ಸಂತಸಂ:—

ಕಂ|| ಪುಟ್ಟುವವೊಲಗ್ರತನಯಂ |
ಪುಟ್ಟದ ನಾಮೂರ್ತಿಪೊಂಗ ಮಾದಿತ್ಯಂಗಂ ||
ಪುಟ್ಟದುದೆನಿಸಿದು ದವನೊಡ |
ವುಟ್ಟದುದಂಬರ ಚರೇಂದ್ರ ಸಾಂದ್ರಂ ತೇಜಂ || ೧೫ ||

ವ|| ಅಂತರ್ಕ ಕೀರ್ತಿಯೆಂಬ ಪಿರಿಯಮಗಂ ಬಳೆಯೆ:—

ಕಂ|| ಸಕಳ ಕಳಾವಿದನಪ್ಪ |
ರ್ಕಕೀರ್ತಿಯಿಂ ಕಿಱಿಯಳಾಮ್ರುಲಸದತಿ ಮೃದುಕೋ ||
ರಕದಿಂ ಬಱಿಯಂ ಮಂಜರಿ |
ನಿಕಾಮ ಕೋಮಳ ವಿಲಾಸದಿಂ ಪುಟ್ಟುವವೋಲ್ || ೧೬ ||

ಚಂ|| ಅಭಿನವರೂಪ ಹಾವ ನವ ಭಾವ ಸಮನ್ವಿತೆ ಪುಟ್ಟಿದಳ್ ಸ್ವಯಂ |
ಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರಪುತ್ರಿಕಾ ||
ನಿಭೆ ಮದನಾವನೀಜನಿಭೆ ಮಾನವ ಮಾನಸ ಕಂಜ ಭಾನು ವ |
ತ್ಪ್ರಭೆ ನಯನೋತ್ಪಲೇಂದು ಕಿರಣಪ್ರಭೆ ಯಪ್ಪುದು ತಪ್ಪದೊಪ್ಪುಗುಂ || ೧೭ ||

ವ|| ತದೀಯ ಜನಕಂ ಜ್ವಳನಜಟಿ ಮಹಾರಾಜಂ ಶುಭದಿನ ಮುಹೂರ್ತದೊಳ್ **ಅರ್ಕಕೀರ್ತಿ**ಗೆ ಗಗನಕೂಟ ಪುರಾಧೀಶನಪ್ಪ **ಜ್ಯೋತಿರಥಂಗಂ** ಸುಂದರಿದೇವಿಗಂ ಪುಟ್ಟದ **ಜ್ಯೋತಿರ್ಮಾಲೆ**ಯಂ ತಂದು ಮದುವೆಯಂ ಮಾಡಿ ಮತ್ತಂ ಸ್ವಯಂಪ್ರಭೆಗಂ:—

ಕಂ|| ಅತಿಶಯ ವಿಶದ ಕಲಾ ಪರಿ |
ಣತಿಯೊಳ್ ಸೆಣಸಾಗೆ ನೆರೆವವೊಲ್ ಯೌವನ ದು ||
ನ್ನತಿ ನೆರೆಯೆ ನೆರೆಯೆ ಕನ್ಯಾ |
ವ್ರತ ಮೊಡ ನೆಱೆದುದು ತದೀಯ ಗುರು ಜನವಿನುತಂ || ೧೮ ||

**ವ||** ಅಂತು ಯೌವನಂ ನೆಱೆವಿನಂ ಒಂದು ದೆವಸಂ ಶ್ರೀ ಪಂಚಮಿಯೊಳುಪವಾಸನಿರತೆಯಾಗಿ ಸಿದ್ಧಕೂಟ ಜಿನೇಂದ್ರ ಮಂದಿರದೊಳ್ ತ್ರಿಭುವನೈಕ ಲಲಾಮನ (ಜಿನನ) ನಭಿಷೇಕಪೂರ್ವಕ ಮಷ್ಟ ವಿಧಾರ್ಚನೆಗಳಿಂದ ಮರ್ಚಿಸಿ ಬಂದು ನಿಜಜನಕಂಗಂ ಜನನಿಗಂ ತಮ್ಮಣ್ಣನಪ್ಪರ್ಕಕೀರ್ತಿಗಂ ಸೇಸೆಯ ನಿಕ್ಕಿ ತನ್ನ ಚೆಂಜೊನ್ನ ಕನ್ನೆವಾಡಕ್ಕೆ ಪೋಪಳಂ ಜ್ವಳನಜಟಿ ನೋಡಿ:—

ಚಂ|| ಅಮಿತ ಮದಾಲಸಾಂಗಜಮತಂಗಜವೋ ನಡೆಗೊಂಡನಂಗ ಜಂ |
ಗಮಲತೆಯೋ ಮದೋತ್ಕ ಕಳಹಂಸೆಯೊ ಚೇತನೆವೆತ್ತ ಚಿತ್ರವೋ ||
ಸಮೆದ ಮನೋಜ ಕೇತನವೊ ಕಣ್ಮಸೆಯಿಟ್ಟರಲಂಬೊ ಕಾಮ ಚಾ |
ಪಮೊ ಕುಸುಮಾಸ್ತ್ರಚಕ್ರಿಕರಚಕ್ರವೊ ಕಾಂತೆ ಬಸಂತ ಕಾಂತೆಯೋ || ೧೯ ||

**ವ||** ಎಂದು ಬಗೆದು ಮಗಳೇಱುಂ ಜವ್ವನಮುಮಂ ಕನ್ಯಾವ್ರತನಿಯತಮಾದ ಪಾವನಮುಮಂ ಸೌಂದರ್ಯಸಂಪ್ರತಿಪತ್ತಿಯುಮಂ, ಲಾವಣ್ಯಸದ್ಭಾವಮುಮಂ, ಸಂಭೋಗಪ್ರಾವೀಣ್ಯಾಭಾವಮುಮಂ, ವಿಭ್ರಮ ಸಂಭಾವಮುಮಂ, ಕಾಮಸಂಭ್ರಮಾವಧೀರಣಮುಮಂ, ವಿಲಾಸ ಸಮೇತತೆಯುಮಂ, ಮಿಥುನಲೀಲಾ ವ್ಯಪೇತತೆಯುಮಂ, ಬೇಱಿವೇಱೆ ಪಚ್ಚಿ ಪಚ್ಚಿ ಮಂತ್ರಿವರ್ಗದೊಳಾಲೋಚಿಸಿ:—

ಕಂ|| ಜನಪತಿ ಬಱಿಯಂ **ಸಂಭಿ** |
**ನ್ನ**ನೆಂಬ ನೈಮಿತ್ತಿಕಂಗೆ ಬಱಿ ಯಟ್ಟೆ ಚಿರಂ ||
ತನರಿರ್ ದೃಷ್ಟ ಪರಂಪರ |
ವಿನೂತ ವಿದ್ಯಾವಿಶೇಷ ವಿದರಿರ್ ಪೇೞಿಂ || ೨೦ ||

ಮ|| ನರರೊಳ್ ಮತ್ಸುತೆಗೀ ಸ್ವಯಂಪ್ರಭೆಗೆ ಪೇೞಾರ್ ಧನ್ಯರಾರ್ ಮಾನ್ಯರಾರ್ |
ದೊರೆ ಯೆಂದಂದವನೀಶ ನೆಟ್ಟು ಬೆಸಗೊಂಡಾಗಳ್ ನಿಮಿತ್ತಜ್ಞ ನಂ ||
ಬರ ಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂ |
ಡಿರ ದಿಂತೆಂದ ನಧೀಶನಂ ಬಗೆದು ಕೇಳ್ ಪೇೞ್ವೆಂ ಖಗಾಧೀಶ್ವರಾ || ೨೧ ||

ಭರತಕ್ಷೇತ್ರ ಲಲಾಮ ಮಪ್ಪುದು ಸುರಮ್ಯಂ ನಾಡು ತತ್ಪಾದನಂ |
ಪುರಮುಂಟಂತದುವಂ **ಪ್ರಜಾಪತಿ** ಮಹೀಪಾಲಂ ದಲಾಳ್ಗುಂ ಜಗ ||
ಕ್ಕೆರಡುದ್ಯನ್ಮದ ಲೇಖೆಯಂತಿರೆ ತದುರ್ವೀಪಾಲಕಂಗಿಷ್ಟ ಸುಂ |
ದರಿಯರ್ ಸುಂದರರೂಪೆಯರ್ ಸೊಬಗೆಯರ್ ಕೂರ್ತಿರ್ಪರುರ್ವೀಶ್ವರಾ || ೨೨ ||

ಕಂ|| ಆ ವಧುವಿರಿರ್ವರೊಳೆ ವಿಜ |
ಯಾವತಿಯೆಂಬಳ್ ವಿಳಾಸವತಿ ಪಿರಿಯ ಮಹಾ ||
ದೇವಿ ಮೃಗನಯನಯುಗೆ ಮೃಗ |
ಯಾವತಿ ಕಿಱಿಯರಸಿ ಯಾಗಿ ಸಲೆ ಸಲಕಾಲಂ || ೨೩ ||

ವ|| ಅಲ್ಲಿ ಪಿರಿಯರಸಿಯ ಮಗಂ ವಿಜಯನುಂ, ಕಿಱಿಯರಸಿಯ ಮಗಂ ತ್ರಿಪೃಷ್ಠನು ಮೆಂಬರ್ ಬಲದೇವ ವಾಸುದೇವರಾಗಿ ಪುಟ್ಟಿದರವ ರೊಳಗೆ:—

ಕಂ|| ವಿಜಯಂ ಲಕ್ಷ್ಮೀ ನಿಲಯಾಂ |
ಬುಜಂ ಜಯಶ್ರೀ ಪ್ರಿಯಂ ತ್ರಿಪೃಷ್ಠ ನರಾತಿ ||
ಧ್ವ [ಜಿ] ನೀ ಸಮಸ್ತ ಮದಸಾ |
ಮಜಕುಲನಗಕುಲಕೆ ಶನಿಯು ಮಶನಿಯು ಮಾದಂ || ೨೪ ||

ಆ ಕಿಱಿಯನ ನಿಭರಿಪು ಕೊಲೆ |
ಲೋಕವನಿಭರಿಪು ವನಸಗ ವೊಯ್ಲೊ ವಯ್ದು ಜಯ ||
ಶ್ರೀಕಬಲಿತ ವೈರಿ ನಿರಾ |
ಲೋಕಂ ಮಾಡಿದ ನಖಂಡಭೂಮಂಡಲಮಂ || ೨೫ ||

ವ|| ಅಂತು ಬಾಳಕೇಳೀಲೀಳೆಯುಂ ಪ್ರಜಾಪಾಲನಮು ನಪ್ಪುಕೆಯೆ ಸಿದ್ಧಾದೇಶದಿಂ ಮತ್ತೊಂದು ದಿವಸಂ ತನ್ಮಯ್ಯ ನೋಲಗದೊಳ್ ಮಾತುಮಾತಾಗೆ ಕುಲವೃದ್ಧರ ನುಡಿಯಂ ವಿಜಯಂ ಕೇಳ್ದು ತಮ್ಮನುಂ ತಾನುಂ ಅನೇಕ ಕುಲರಾಜ ಸಮಾಜಂ ಬೆರಸು ಆಡುವ ನೆವದೊಳ್ ಪೋಗಿ ಕೋಟಿಕ ಶಿಲೆಯಂ ತೋಱೆ:—

ಮ|| ಕ್ಷಿತಿನಾಥತ್ವಮು ನೊಲ್ವ ರಾಜತನಯರ್ ಪೂಣ್ದೆತ್ತಲೀ ಪ್ರಸ್ತರ |
ಕ್ಕೆ ತಗುಳ್ವೆಂಬುದು ಮೆತ್ತಿಕೊಂಡು ಗಗನಕ್ಕೀಡಾಡಿ ವಾಮೇತರಾ ||
ಯತ ಹಸ್ತಾಗ್ರದೊಳಾಂತು ತಾಳ್ದಿ ದುದಱಿಂ ಬಾಳತ್ವದೊಳ್ ಕೋಟಿಕಾಂ |
ತಿತ ಮಾಕಲ್ ತಿರಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಱಂಗಕ್ಕುಮೇ || ೨೬ ||

ವ|| ಅದಲ್ಲದೆಯು ಮಳಕಾಪುರವರೇಶ್ವರಂ **ಮಯೂರಗ್ರೀವಂಗಂ ನೀಳಾಂಜನೆಗಂ** ಪುಟ್ಟಿದ ನಿಖಿಳ ಖೇಚರ ಲಲಾಮಾಯಮಾಣಂ ತ್ರಿಖಂಡಾಧಿಪಂ ಅರ್ಧಚಕ್ರವರ್ತಿ ಯಪ್ಪ **ಹಯಗ್ರೀವಂ ಆತ್ರಿಪೃಷ್ಠ**ಂಗಿದಿರ್ಚೆ:—

ಮ|| ವನನಾಗಾರಿಯ ನಾಂತ ದಂತಿಶಿಶುವೊಲ್ ದಿಗ್ದಂತಿಯೊಳ್ ಪೋರ್ದ ಹೀ |
ನನವೋಲ್ ಗಾಳಿಯ ಕೋಟಿಜೊಳಿಟ್ಟ ಸೊಡರ್ವೋಲ್ ದಾವಾಗ್ನಿಗೊಡ್ಡಿರ್ದ ಕಾ ||
ನನಕುಂಜಂಬೊ ಲಿನಂಗೆ ನಿಂದ ತಿಮಿರವ್ಯೂಹಂಬೊ ಲುಗ್ರಾಹಿ ಮ |
ರ್ದನದೊಳ್ ಮುಚ್ಚರವುಳ್ಳ ಬಾಳಫಣಿವೋಲ್ ನೀಡಿಲ್ಲದಕ್ಕಾಡುಗುಂ || ೨೭ ||

ವ|| ಈ ವಚನ ಮಾದೇಶವಚನ ಮಂತು:—

ಚಂ|| ತ್ರಿಭುವನ ಭೂಷಣೋಪಮೆಗೆ ಸಂಗಮದೊಳ್ ಪರಭಾಗ ವಿಸ್ಫಯಂ |
ಪ್ರಭೆಗೆ ಲುಲತ್ತಟಿತ್ಪ್ರಭೆಗೆ ಬಂಧುರ ಸಿಂಧುರ ನೀಲನೀರವ ||
ಪ್ರಭ ನಭಯಂ ತ್ರಿಪೃಷ್ಠ ನುಱದರ್ ನಿಲೆ ಕಲ್ಪಲತಾಶ್ರಯಕ್ಕೆ ನಿ |
ಪ್ರಭತನುವುಳ್ಳರಂದೊರೆಗೆ ವಾರದವೋಲ್ ದೊರೆಯಾಗ ಲಾರ್ಕುಮೇ || ೨೮ ||

ವ|| ಅದಱಿಂ ನಿಮ್ಮ ಕೊಂಡಾಟದ ಮಗಳಪ್ಪ:—

ಕಂ|| ಕಿಱಿಯವ ಳಾತನೊಳಲ್ಲದೆ |
ಪೆಱರೊಳ ಸಂಪೂರ್ಣ ನಿಜಮನೋರಥ ಪೆಱದೇಂ ||
ಮಱಿದುಂಬಿ ಪೂತ ಚೂತದೊ |
ಳೆಱಗುಗು ಮೆಱಗುಗುಮೆ ಸಲ್ಲಿಕೀ ಪಲ್ಲವದೊಳ್ || ೨೯ ||

ಚಂ|| ಎನೆ ಖಚರಾಧಿನಾಥ ನವಧಾರಿಸಿ ದೂತನ ನಿಂದು ವೆಂಬೊನಂ |
ಮನಮೆನಿಪನ್ನ ಸಂ ನಯದಿ ನಟ್ಟಿದೊಡಾತನು ಮೆಯ್ದು ಪೋಗಿ ಪೌ ||
ದನ ಪುರಮಂ ಪ್ರಜಾಪತಿ ಮಹೀಪತಿ ಮಂದಿರಮಂ ತದುರ್ವರೀ |
ಶನ ಮತದಿಂದೆ ಪೊಕ್ಕು ಮಣಿಮಾಲೆಯ ಲೀಲೆಯ ಚಿತ್ರಶಾಲೆಯಾ || ೩೦ ||

ವ|| ಮೃಗೇಂದ್ರವಿಷ್ಟರಾರೂಢ ನಾಗಿರ್ದ ಪ್ರಜಾಪತಿಮಹೀಪಾಲನಂ ದ್ವಾರಪಾಲಕ ಸಂದರ್ಶಿತಂ ಕಂಡು ಮಹೀತಳಾಶ್ಲಿಷ್ಟ ಲಲಾಟಪಟ್ಟ ನೆಱಗಿ ಪೊಡವಟ್ಟು ಯಥೋಪದಿಷ್ಟಾಸನದೊಳ್ ಕುಳ್ಳಿರ್ದು—

ಕಂ|| ಭೂಪಂ ಬೆಸಗೊಳೆ ಮಧುರಾ |
ಳಾಪಂ ಬಿನ್ನವಿಕು ಮಿಂದು ಶರದಿಂದು ಯಶೋ ||
ರೂಪ ನಭಿರೂಪ ಶೀಳ ಕ |
ಲಾಪಂ ಮತ್ಸ್ವಾಮಿ ನಿಮ್ಮ ಭಾವಂ ದೇವಾ || ೩೧ ||
ಜ್ವಳನಜಟಿ ವೈರಿಭೂಭೃ |
ಜ್ಜ್ವಳನಂ ನಮಿ ಬಾಹುಬಲಿ ಮಹೀಭುಜರಿಂದಂ ||
ತೊಲಗದದಾಮುಂ ತಾಮುಂ |
ತೊಲಗಿಸೆ ತೊಲಗಿದುದು ತಮ್ಮ ವರ್ತನ ವಿಸಾಗಳ್ || ೩೨ ||

ವ|| ಎಂದು ಪಟ್ಟಸೂತ್ರದೆರಡೆಳೆಯುಮಂ ಗಂಟಿಕ್ಕುವಂತೆ ಪರಂಪರಮುಂ ಪೞಮಱಿವುಮಾದ ನಣ್ಪಂ ಪುನರ್ನವಂ ಮಾೞ್ಪ ಬಗೆಯಿಂ ಎನ್ನ ನಿಂತೆಂದಟ್ಟಿದ ನೆಮ್ಮರಸಂ, ತನ್ನ ಮಗಳಪ್ಪ ಕನ್ಯಾರತ್ನಮಂ ಸ್ವಯಂಪ್ರಭೆಯಂ:—

ಉ|| ಕಂಪಿನ ಪೆಂಪು ಪೊಂಪುೞಿ ಯೆನಲ್ ದೊರೆನೆತ್ತ ನಮೋರು ಮಾಲೆ ಯಿಂ |
ಪಂ ಪರಿಚುಂಬಿಸಲ್ ಬಯಸಿ ಬರ್ಪ ಳಿಮಾಳಿಕೆಯಂತೆ ನಿಚ್ಚ ನಿ |
ಚ್ಚಂ ಪುನರುಕ್ತದಿಂ ಖಚರ ಭೂಚರ ಕೋಟಿ ಮರಲ್ದು ಬೇಡಿ ಬಾ |
ಯಂ ಪೊಳಪುತ್ತು ಮಿರ್ಪುದು ಪುರೋಪವನಾಂತರ ಭೂಮಿಭಾಗದೊಳ್ || ೩೩ ||

ಕಂ|| ಆ ಯುವತಿ ರತ್ನಮಂ ಭವ |
ದೀಯಾತ್ಮಜ ಪುರುಷ ರತ್ನದೊಳ್ ಕೂಡುವಭಿ ||
ಪ್ರಾಯಂ ಪ್ರೀತಿಲತಾ ಶಾ |
ಖಾಯಮ ನಡರ್ದಪೆನೆ ಯೆಂದು ಖೇಚರರಾಜಂ || ೩೪ ||
ಒಸೆದಟ್ಟಿದ ನಟ್ಟಿದ ವಿಭು |
ಗೆ ಸಂತಸಂ ಮಾಡಿ ಬರೆದ ಮಾಱೋಲೆಯ ನೆ ||
ಯ್ದಿಸಿದೊಡೆ ನಡೆಯುತ್ತುಂ ಬಾ |
ಚಿಸಿ ತಡೆಯದೆ ಬರ್ಕು ಮಿರ್ಕುಮೇ ಖಚರೇಂದ್ರಂ || ೩೫ ||

ಉ|| ಎಂಬುದು ಮುಂಬುದ ಧ್ವನಿಗೆ ಪೆರ್ಚಿದ ಮುತ್ತಮಯೂರವಂತೆ ರಾ |
ಗಂ ಬಗೆಯಂ ಪಳಂಚಲೆಯೆ ತನ್ನೆರಡುಂ ಕೆಲದೊಳ್ ಮೃಗಂದಿರಿ ||
ರ್ದಿಂಬಿನಮುರ್ಕೆ ಗಿರ್ಕೆಲದ ಬೀಟಲ ಕಲ್ಪಕುಜಂಬೊಲಪ್ಪಿ ಸ |
ಣ್ಣಿಂ ಬಗೆದಟ್ಟಿದೋಲೆವೆರಸಾಲಿಸಿ ದೂತನ ಮಾತನೆಲ್ಲಮಂ || ೩೬ ||

ವ|| ಕೇಳ್ದು ಮೂಱು ಲೋಕಮ ನಾಳ್ದಂತೆ ಗೆಯ್ದು ಸಂತಸಂ ಬಟ್ಟು ಬಂದ ದೂತನಂ ದಾನ ಸನ್ಮಾನಾದಿಗಳಿಂ ಸಂತಸಂ ಬಡಿಸಿ ತ್ರಿಪೃಷ್ಠ ನೊಡಂಬಡಿಸಿ ಜ್ವಳನಜಟಿ ಮಹೀಪಾಲಂಗೆ ಬಱಿವೆರಸು ತನ್ನ ಮನೆಯೊಳಗ್ಗಳಮಪ್ಪಮೂಲ್ಯ ವಸ್ತುಗಳಂ ಪ್ರಜಾಪತಿ ಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯ ನಿಂದು ನಾಳೆನ್ನದೆ ಬಂದ ಪೊಱಿ್ತು ಪೊಱ್ತಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದು ಮಾತನುಂ ಗಗನ ಗಮನನಾಗಿ ವಿವಿಧನದನದೀನಗನಗರ ಜನಪದಾಸ್ಪದಂ ನಿಜ ನಾಥಪುರವರಮ ನೆಯ್ದಿ ರಾಜಕೇತನ ನಿವಿಷ್ಟ ನೊಡ್ಡೋಲಗಂ ಗೊಟ್ಟಿರ್ದ ಗಗನಚರೇಂದ್ರನಂ ದೂರಾವನತ ಮಸ್ತಕಂ ಕ್ಷಿತಿತಳ ನಿಪಾತಿತ ಸಾಷ್ಟಾಂಗ ನಾಗಿ ಕಂಡು:—

ಹರಿಣೀವೃತ್ತಂ|| ಮುಕುಳಿತ ಕರೋಪೇತಂ ದೂತಂ ಪ್ರಜಾಪತಿ ಪಾರಮಾ |
ರ್ಥಿಕ ವಚನ ಸದ್ಭಾವಂ ಭಾವಂಗುಪಾಯನ ಭೂಷಣ ||
ಪ್ರಕರಮ ನಿವೇಂದೌತ್ಸುಕ್ಯಾಕ್ರಾಂತ ನಟ್ಟಿದೊ ನಾತ್ಮಪು |
ತ್ರಕ ವಿವಹನ ಪ್ರೀತಂ ರೋಮಾಂಚ ಕಂಚುಕಿತಾಂಗಕಂ || ೩೭ ||

ವ|| ಎಂದು ಬಿನ್ನಪಂ ಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನು ಮಾದ ರಸವಾದಿಯಂತೆ ಜ್ವಳನ ಜಟಿ ರಾಗಿಸಿ ನೈಮಿತ್ತಿಕನಂ ಬರಿಸಿ ತದಾತನಮು ಮತ್ಯಂತ ನೂತನಮು ಮಪ್ಪುದೊಂದು ಲಗ್ನಮಂ ಪೇೞಿ ಮೆಂಬುದುಂ ಆತಂ ತನ್ಮುಹೂರ್ತಮೆ ಶುಭಮುಹೂರ್ತ ಮೆಂಬುದುಂ ಅಂಬರಚರರಾಜ ನಂಬರ ಚರ ಗೋಚರೋಚಿತ ಪ್ರಸ್ಥಾನದಿಂ ಪಯಣಂಬೋಗಿ ತನ್ನ ಬರವ ನಱಿದು ಪುರವರಮ ನಾಗಳ್ಪ್ಪಶೋಭೆಗೆಯ್ಸಿ ಬೇಗಮಿದಿರ್ವಂದ ಪ್ರಜಾಪತಿ ಮಹೀಪಾಲನಂ ಜ್ವಳನಜಟಿ ಮಹಾರಾಜಂ ಯಥಾರ್ಹ ಪ್ರತಿಪತ್ತಿಯಿಂ ಕಂಡು ನೈದುನ ನಿರ್ವರುಂ ಪುತ್ರಪುತ್ರೀ ಸಹಿತಂ ಪೊೞಲಂ ಪುಗುವಾಗಳ್ ವಿದ್ಯಾಧರ ಭೂಮಿಗೋಚರರೊಂದಾಗಿ ಭೂಮಿಮಾರ್ಗದಿಂ ರಾಜಮಾರ್ಗದೊಳಗನೆ ಬರ್ಪುದುಮಂ ಪೌರ ನರ ನಾರೀ ಜನಂಗಳುತ್ತುಂಗ ಪ್ರಾಸಾದ ಗೋಪುರಾಟ್ಟಾಳಕ ಕೋಟಿಗಳ ನೇಱಿ ನೋಡುತ್ತುಂ:—

ಮ|| ಎಸೆದೊಪ್ಪಿರ್ದ ವಿಮಾನಮಾಲೆ ಖಚರಾನೀಕಕ್ಕೆ ಚಿಹ್ನಂಗಳಾ |
ಗಸದೊಳ್ ಪಣ್ಣಿದ ಪೊನ್ನ ಪಣ್ಣಿಗೆ ಯಿಭಂಗಳ್ ಚಿಹ್ನ ಮುರ್ವೀಚರ ||
ಪ್ರಸರಕ್ಕುರ್ವಿಯೊ ಳಂತರಾಳದೊಳ ನೇಕಸ್ತ್ರೀವೃ ತಾಸೂನ ಯಾ |
ನ ಸಮೂಹಂ ಖಗ ಕನ್ನೆಗಗ್ಗಳದ ಚಿಹ್ನಂ ನೋಡಿ ಮೆಂಬನ್ನೆಗಂ || ೩೮ ||

ವ|| ಬರ್ಪಾಕೆಯ ನೀಕೆ ಸ್ವಯಂಪ್ರಭೆ ಯೆಂದಱಿದು:—

ಮ|| ಸ್ರ|| ಎರಡುಂ ಭಾಗಂಗಳೊಳ್ ತನ್ನಣುಗಿನ ಸುತರು ನ್ಮತ್ತನಾಗಂಗಳಂ ಜೀಂ |
ಕರಿಸುತ್ತಿಂಬಾಗಿ ಬಂಬಲ್ವರಿಯಿಸೆ ತುರಗಾರೂಢ ನೀಬರ್ಪ ನಸ್ಮ ||
ದ್ಧರಣೀಶಂ ಮತ್ತುದಾತ್ತಂ ಜ್ವಳನಜಟಿ ದಲಾಬರ್ಪ ನುತ್ತೇಥವತ್ಸಿಂ |
ಧುರ ರಾಜಸ್ಕಂಧ ಸಂಬಂಧುರ ಲುಳಿತ ತಟಿದ್ದಾಮ ಶಂಕಾಂಕುಶಾಂಕಂ || ೩೯ ||

ವ|| ಎಂದಜಾತಪೂರ್ವವಿಸ್ಮಯಸ್ಮೇರಮುಖರಾಗಿರೆ ಬಂದು ರಾಜಗೇಹಮಂ ಪೊಕ್ಕು ಕಱು ಮಾಡದೊಳ್ ವಿದ್ಯಾಧರ ರಾಜನ ನಿರಿಸಿ ಸ್ವಯಂಪ್ರಭೆಗಂ ರಾಣೀವಾಸದ ಕನ್ನೆವಾಡದೊಳ್ ಪರಿವಾರಿಕಾ ( ದೌವಾರಿಕಾ ) ಸಮೇತಮಿರವಂ ಮಾಡಿ ಮಜ್ಜನಭೋಜನಾದಿ ದಾನಸನ್ಮಾನಂಗಳೊಳ್ ಜ್ವಳನಜಟಿಯಂ ಸಂತಸಂಬಡಿಸಿ ಪ್ರಜಾಪತಿ ಮಹಾರಾಜಂ ವಿವಿಧ ವಿನೋದ ದರ್ಶನಾನಂತರಂ ಪುಣ್ಯದಿನದೊಳ್ ತ್ರಿಪೃಷ್ಟನಂ ಸ್ವಯಂಪ್ರಭೆಯೊಳ್ ನೆರಪಿ:—

ಕಂ|| ಸಾರತರ ಕಲ್ಪ ತರುಗಮು |
ದಾರೋತ್ತಮ ಕಲ್ಪಲತೆಗಮಭಿವೃದ್ಧಿಗೆ ಪೊ ||
ಯ್ಯಾರೆಚಿವಂತಾಗಿರೆ ಕೆ |
ಯ್ಯಾರೆಜಿವರ್ ಖಚರಪತಿಯು ಮವನೀಪತಿಯುಂ || ೪೦ ||

ಪರಸಿದ ಪರಕೆಗಳಾದುವು |
ನಿರುತಂ ದಂಪತಿಗೆ ಧರೆಗೆ ಪೂರ್ಣ್ದೀಯೆ ಧನೋ ||
ತ್ಕರಮಂ ಸಮನಾದರ್ ಜಡ |
ವ ಜೊಡೆಯ ರೆಲ್ಲರ್ ಸಲೀಲ ರಥನರ್ ಧನವರ್ || ೪೧ ||

ವ|| ಎಂಬಿನಂ ಪೊಸಯಿಸಿದ ವಿವಾಹ ಕಲ್ಯಾಣ ವಿರಾಮದೊಳ್ ಜ್ವಳನಜಟಿಯು ಮರ್ಕಕೀರ್ತಿಯುಂ:—

ಕಂ|| ತಲೆಬಳಿವಳಿ ಯೆಂಬೀಶ್ರವೆ |
ನೆಲಕೆಲ್ಲಂ ಪರೆಯೆ ನುಡಿದು ವಿದ್ಯಾಸಹಿತಂ ||
ಕುಲಧನ ಸಹಿತಂ ಹರಿಕರಿ |
ವಿಲಾಸಿನೀ ಸಹಿತ ಮಿತ್ತರುಳ್ಕೊಡಮೆಗಳಂ || ೪೨ ||

ವ|| ಅಂತು ನಿರ್ವಹಿಸಿದ ವಿವಾಹವ್ಯತಿಕರದ ಪರಿವ ಪಡೆಮಾತ ನರ್ಧ ಚಕ್ರವರ್ತಿ ವಿಜಯಾರ್ಧ ಶೈಲಮೂರ್ಧವರ್ತಿ ರೇಖಾವಳೀ ವಿಲಾಸ ಸಮಗ್ರೀವ ನಶ್ವಗ್ರೀವಂ ಕೇಳ್ದು:—

ಕಂ|| ರತ್ನಂಗ ಳೆರಡರೊಳ್ ಸ್ತ್ರೀ |
ರತ್ನಮ ನೆನಗೆಂಬ ಬಗೆಯಿ ನಿರ್ದೆನ್ನೀ ಶ್ರೀ ||
ಪತ್ನೀಶತೆಯಂ ಬಗೆಯದೆ |
ಯತ್ನಪರರ್ ದೇಸಿಗಂಗೆ ಕೂಸಂ ಕೊಟ್ಟರ್ || ೪೩ ||

ಕೊಟ್ಟೊಡಮೇಂ ಕನ್ನಿಕೆಯಂ |
ಕೊಟ್ಟೊಂಗ ಮಿದಾಗದೆಂದು ಕುಡೆ ಕೊಂಡೆನಗೇ ||
ಗೆಟ್ಟಪುದೆಂದು ಮನಂ ಪೊಲೆ |
ಗೆಟ್ಟರೆ ಕೊಂಡಂಗ ಮೆನಗ ಮಱಿಯ ಲ್ಕಕ್ಕುಂ || ೪೪ ||

ಶಾ|| ಎಂದಾಗಳ್ ವಿಳಯಾನಿಳೋಚ್ಚಳಿತ ಕೂಪಾರಾರವಂ ಖೇಚರೇಂ |
ದ್ರಂ ದಷ್ಟಾಧರ ನಾತ್ಮಪೀಠ ತಳಮಂ ಪೊಯ್ದೆದ್ದು ನಿಂದಾಗಳಂ ||
ತೊಂದುಗ್ರಂ ಕರಿ ಪಟ್ಟದಿಂ ನಡೆವವೋಲಾಸ್ಥಾನದಿಂ ಬಂದು ನಿಂ |
ದಂ ದೌವಾರಿಕ ಭೂಮಿಗೊಳ್ ಸ್ಫುರದುರುಶ್ಮಶ್ರೂತ್ಕರಂ ಭೀಕರಂ || ೪೫ ||

**ವ||** ಅಂತಲ್ಲಿಂ ಬಂದು ನಿಲ್ವುದುಂ ಸಂಭ್ರಮಾಕುಳನು ಮುದನತೋತ್ತಮಾಂಗನು ಮಾಗಿ ಬಂದು ಮುಂದೆ ನಿಂದು ಸೇನಾಗ್ರಗಣ್ಯಂ ಬೆಸನಂ ಪಾರುತ್ತು ಮಿರೆ:—

ಕಂ|| ಆ ಚಕ್ರಿಭ್ರೂಲತೆ ಸಚ |
ರಾಚರಮಂ ನೆರಪವೇೞೆ ನೆರಪುವುದುಂ ರೂ ||
ಪ್ಯಾಚಳ ಗೋಚರ ಖಚರ ಮ |
ಹೀಚರ ರೊರ್ನೊದಲೆ ನೆರೆದ ರಪರಿಮಿತ ಬಲರ್ || ೪೬ ||

ನೆರೆದು ನಭೋ ಭೂ ವಳಯಾಂ |
ತರಂಗದೊಳ್ ತಮ್ಮ ಹಯಮೆ ಹಯಮಾಗಿರೆ ಖೇ ||
ಚರರಾಜಂ ತಳರ್ದಂ ನೆಗ |
ೞ್ದ ರಥಾವರ್ತಾದ್ರಿ ಗದ್ರಿ ತಳರ್ವಂತಾಗಳ್ || ೪೭ ||

**ವ||** ಅಂತು ರಥಾವರ್ತಾಚಳಮ ನೆಯ್ದಿ ಬೀಡಂ ಬಿಟ್ಟು ಮುದುವೆ ನೆರೆದಿರ್ದ ವರನುಮಂ ನೆರೆದಿರ್ದ ನೃಪವರರುಮಂ ಮೂದಲಿಸಿ ಮಾತಂ ಬೂತುಮ ನಟ್ಟುವುದುಂ ದರ್ಪಿಷ್ಠನಪ್ಪ ತ್ರಿಪೃಷ್ಠ ಕುಮಾರಕಂ:—

ಕಂ|| ಕೊಲ್ವೆ ನರಾತಿಯ ನಿಂದೆ ಪೊ |
ನಲ್ವರಿವಿನ ಮೆಯ್ದೆ ವೀರರಸ ಮೇ ಮಾತೊ ||
ಡ್ಡಲ್ವೇೞ್ವುದಿಂದೆ ತಱಿದು ಪ |
ಡಲ್ವಡಿಸೆನೆ ಖಚರ ಸೈನ್ಯ ವಿಷಮಾಟವಿಯಂ || ೪೮ ||

**ವ||** ಎಂದು ಗರ್ಜಿಸಿ ಬಂದೊನಂ ಮುಹೂರ್ತಮಾತ್ರಮಪ್ಪೊಡಂ ತಡೆಯಲೀಯದೆ ಬೂತಿಂಗೆ ಧನಮುಮಂ ದೂತಂಗೆ ಪ್ರಸಾಧನಮುಮ ನಿತ್ತು ಪೋಗಲ್ವೇೞ್ದು ತಾನು ಮಾತನ ಬೞಿವೞಿಯನೆ:—

ಮ|| ವಿಜಯಶ್ರೀ ರಣದೊಳ್ ಸ್ವಯಂಪ್ರಭೆ ಜಯಾರಂಭಂ ಮಹೋಗ್ರಾಜಿಯೊಳ್ |
ವಿಜಯಂ ವೀರರಸಂ ನಿಜಾಭಿ ಮುಖದೊಳ್ ಕಾಮಂ ಸಮುಗ್ರಾಹವ ||
ಧ್ವಜ ನಮ್ಮಂ ಸಮುದೈಕ ಸಾಹಸಮುದಂ ಭಾವಂ ತ್ರಿಪೃಷ್ಠಂಗರಿ |
ಧ್ವಜಿನೀ ಮಾರಣಮೇನೊ ಯೂಥವಧದಿಂವ ಕ್ಲೇಶ ಮೆಂಬನ್ನೆಗಂ || ೪೯ ||

**ವ||** ಪಯಣದ ಮೇಲೆ ಪಯಣಂ ಬಂದು ರಥಾವರ್ತ ಮಹೀಧರಮ ನೆಯ್ದಿ ಬೀಡಂ ಬಿಟ್ಟು ಜೇಗದೊಳ್ ಜೇಗಮುಣ್ಮುಟ್ಟಾಗಿಯುಂ ಅಡಿಗಿಡದೆಯುಂ ಇನಿಸೆಡೆಗುಡದೆಯುಂ ಸಾರ್ಚಿ ಸ್ತ್ರೈಣದಿಂ ಪೆರ್ಚಿದ ಕೋಪೋದ್ರೇಕಮನಾಜಲೀಯದೆಯುಂ ಜೇಗಮನುವರಮಂ ಸಾರಲ್ವೇೞ್ದು ರುಳೊಳ್ ಕೊಳ್ಳಿವಿಸಿಯುಂ ರವಳಿ ಘೋಷಿಸಿಯುಂ ನಾಲ್ಕುಜಾವಮು ಮನುವರಮನೆ ಸಮಕಟ್ಟುತ್ತು ಮಿರೆಯಿರೆ,

ಕಂ|| ವನಿತೆ ಪರಸ್ತ್ರೀ ಪೆಱಗಿ |
ತ್ತನಿತಱಿಳಱದಱದು ಮಳುಪ ನಾದ ಶ್ವಗ್ರೀ ||
ವನ ಮಿೞ್ತು ಪೊೞ್ತುವಾರ್ದಪು |
ದೆನಗೇಂ ತಡಮೆಂಬ ತೆಱದಿ ನಿನ ನುದಯಿಪುದುಂ || ೫೦ ||

ವ|| ಚಕ್ರವರ್ತಿ ಯುದ್ಧಸನ್ನದ್ಧನಾಗಿ ಸಮಸ್ತ ಸಾಮಗ್ರೀ ಸಹಿತಂ ಶಿಬಿರದಿಂ ಪೂಜ ಮಟ್ಟೋಡಿದ ನಂತೆ:—

ಕಂ|| ಆಯು ತವೆ ಪಾರದರಿಗ ನ |
ಪಾಯಮ ನೆತ್ತಱಿವ ನುಚಿತ ವಾಕ್ಯಾರ್ಥಂ ಕೊ ||
ಳ್ಳೀಯೆ ಪರದಾರಗಮನ ವು |
ನಾಯುಷ್ಯಂ ತಮ ಮೆನಲ್ ಮನಂದಂಪಪನೇ || ೫೧ ||

ವ|| ಇತ್ತ ತ್ರಿಪೃಷ್ಠನುಂ ವಿಜಯನು ಮರ್ಕಕೀರ್ತಿಯುಂ ಪ್ರಜಾಪತಿಯುಂ ಜ್ವಳನಜಟಿಯುಂ ಪಸರಿಸಿ ಸಮಕಟ್ಟ ಮೂಜು ಮೊನೆಯಾ ಗೊಡ್ಡಿ ಸ್ವಯಂಪ್ರಭೆಗಂ ಬೀಡಿಂಗಂ ತಮ್ಮ ಸಚ್ಚುವ ವಿದ್ಯೆಗಳಂ ಕಾಪುವೇಟ್ಟು ಪರಿಚ್ಛೇದಕ್ಕೆ ವಂದು ನಿಂದಾಗಳ್:—

ಕಂ|| ಆ ಸಮಯದೊಳರಿಬಲ ಸಂ |
ತ್ರಾಸಿ ಬಲಿಷ್ಠಂ ತ್ರಿಪೃಷ್ಠ ನಶ್ವಗ್ರೀವೋ |
ದ್ಭಾಸಿ ಪ್ರದೀಪಮಂ ಕಿಡೆ |
ಬೀಸುವವೋಲ ಸುವರಕ್ಕೆ ಕೆಯ್ವಾಸುವುದುಂ || ೫೨ ||

ಹರಿಣೀವೃತ್ತಂ|| ಎರಡು ಬಲಮುಂ ಘೋರಂದಾರ್ದು ಚರ ಭೂಮಿಗೋ |
ಚರ ಸಮುದಿತಂ ಬಾಸೊಳ್ ಭೂಭಾಗದೊಳ್ ಕಿಡಿಗುಟ್ಟಿದಂ ||
ತಿರೆ ಪೆಣೆದು ಬಿಲ್ವಿಲ್ಲಂ ತೇರ್ ತೇರ ನಾನೆಯು ಮಾನೆಯಂ |
ಹರಿ ಹರಿಯ ನಾಂತಾಗಳ್ ನಿಂದಣ್ಮಿ ಮಣ್ಮಟಿ ಯಪ್ಪುದುಂ || ೫೩ ||

ಕಂ|| ತೊಟ್ಟನೆ ಕೋಳೆ ಚತುರಂಗದ |
ಮುಟ್ಟಂ ಕೆವಱಿದವೊಲಂತಕಂ ಪೆಣನಂ ನಾ ||
ಲಿಟ್ಟವೊಲಿರೆ ಸೈನ್ಯಂ ಪಡ |
ಲಿಟ್ಟವೊಲಿರೆ ಪರಿವ ಪಿರಿಯ ಕರಿಯಂ ವಿಜಯಂ || ೫೪ ||

ಕಂಡಣೆದು ನೂಂಕಿ ಮದವೇ |
ತಂಡಮ ನಿದಿರಾದ ವಿಪುಳ ಕಂಠನ ನಿನಿಸಂ ||
ಕೊಂಡಿರದೆ ಕೊಂದು ಗೆಲ್ಲಂ |
ಗೊಂಡಂ ಬಗೆಗೊಳ್ವ ತೆಱದೆ ವಿಜಯಾಂಗನೆಯಂ || ೫೫ ||

ವ|| ಅಂತು ವಿಜಯ ನಶ್ವಗ್ರೀವನ ಮಗನಪ್ಪ ವಿಪುಳಕಂಠನಂ ತನ್ನವಾರ್ಯ ವೀರ್ಯಕೆ ಮುಡಿಗಿಕ್ಕುವಂತಿಕ್ಕೆ ಕೆಯ್ಮಿಕ್ಕ ಳಲೊಳ ನಿಬರು ಮೊಂದಾಗಿ ಬಂದು ತಾಗೆ ದಿವ್ಯಚಾಪಂ ಪೊಱಮುಯ್ವಂ ತಾಗೆ:—

ಕಂ|| ತೆಗೆನೆಱೆದು ಚಿತ್ರಮೂಲಾ |
ದಿಗಳುಮ ನೋರೊಂದೆ ಸರಲೊ ಳೋರೊರ್ವರ ನಾ ||
ವಗ ನೆಚ್ಚಂತಕ ಮುಖಮಂ |
ಪುಗಿಸಿದ ನಾರಾಂಪೊ ರುಱದೆ ಹಲಿಯಂ ಕಲಿಯಂ || ೫೬ ||

ವ|| ಅಂತು ಬಲದೇವನ ಶ್ವಗ್ರೀವನ ತಮ್ಮನಪ್ಪ ಸುಕಂಠನುಮಂ ಮೃತ್ಯು ಕಂಠೀರವಕ್ಕೆ ಗ್ರಾಸಂ
ಮಾಡಿ ಮುಗುಳ್ದು ಹಲಾಯುಧಮ ನೆತ್ತಿಕೊಂಡು:—

ಕಂ|| ಧೃತವಿಷಮುಬಾಣನಂ ಜಿನ |
ಪತಿ ಗೆಲ್ದವೊಲಾತನಂ ಪ್ರಜಾಪತಿ ಧರಣೀ ||
ಪತಿ ಕಾಮದೇವನಂ ಗೆ |
ಲ್ದು ತಳರದ ನಿವಾರ್ಯ ವೀರ್ಯಮಂ ಪೊಸಯಿಸಿದಂ || ೫೭ ||

ಸ್ರ|| ಅಂತಾಸಂಗ್ರಾಮದೊಳ್ ತನ್ನನುಜ ತನುಜ ಜಾಮಾತೃವರ್ಗಂ ಪಡಲ್ವ |
ಟ್ಟಂತಾಗಳ್ ನೊಟ್ಗಿ ತಟ್ಗಿ ಪ್ಪುದು ಮಣೆದಿಭಮಂ ಕೀಱಿ ಬಿಟ್ಟೆಕ್ಕಿ ಪಾಂಗ ||
ಪ್ಪಂ ತಶ್ವಗ್ರೀವ ನೆಟ್ಟಿಂದಹಿತನ ಮೊನೆ ಯೆತ್ತೆತ್ತಣಂ ಪೇೞ್ ತ್ರಿಪೃಷ್ಠಂ |
ಭ್ರಾಂತಾತ್ಮಂ ತೋಱು ತೋಱೆಂದೊದಱಿ ಗಜಮಹಾಪೃಷ್ಠನಿಷ್ಠಂ ತ್ರಿಪೃಷ್ಠಂ || ೫೮ ||

ಕಂ|| ಇದಿರಂ ಪರಿಯಿಸಿ ನಿಜಮದ |
ರದನಿಯ ನಿತ್ತಿತ್ತ ಪರಿಯಿ ಸಣ್ಮಣ್ಮೆಂದಾ ||
ರ್ದೊದವಿಸೆ ಸೋನೆಯ ಕೋಲ್ಗಳ |
ಪುದುವಿನ ಕಿಱುಮೊರಡಿಯನ್ನ ನಾದೊಂ ಖಚರಂ || ೫೯ ||

ಇಸುವಂಬ ನಂಬಿನಿಂ ಖಂ |
ಡಿಸಿ ಗರುಡಧ್ವಜನ ಗಜದ ಮೊಗಚರ್ಮಮ ನ ||
ರ್ವಿಸುವಿನ ಮಿಸೆ ಪೊಸ ಮುಸೆಯುಂ |
ಬಸವಳ ಮೊಡನೆಱಗಿ ತುಱುಗಿ ಪಾಯ್ದುವು ಕೆಲವುಂ || ೬೦ ||

ವ|| ಅಂತು ಕಡುಗೆಯ್ಯನಾಗಿ ಶೀಘ್ರಸಂಧಾನ ಮಿಸು ವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ
ಕಿಡೆ:—

ಕಂ|| ಎಸಿತೆಸಿ ತಿಸುವಂಬುಗಳಸಿ |
ತಸಿತಱಿ ಸಪ ಸರಿದು ತಱಿದು ನೆರೆದಶ್ವಗ್ರೀ ||
ವನ ಬಿಲ್ಲ ಗೊಣೆಯುಮಂ ಭೋಂ |
ಕನೆ ಕುಱಿವಱಿ ಪಱಿದ ನಬ್ಜ ಜಠರಂ ಧುರದೊಳ್ || ೬೧ ||

ವ|| ಅಂತು ಬಿಲ್ಲ ಗೊಣೆಯುಮಂ ಪಱಿವುದುಂ ದೇವಚಾಪದಂತೆ ನಿರ್ಗುಣಮಪ್ಪ ಬಿಲ್ಲ ನೀಡಾಡಿ
ನಾಡಾಡಿಯುಲ್ಲ ವಣ್ಮು ಕೆಯ್ಗಣ್ಮೆ ಪೊಣ್ಮೆ ತನ್ನುಳ್ಳ ವಿದ್ಯೆಗಳಂ ಬೆಸಸಿ ಕಾದುವಾಗಳ್:—

ಕಂ|| ಅಂತಾ ವಿದ್ಯೆಗಳಂ ನರ |
ಕಾಂತಕ ನಲಸದೆ "ವಿಷಂ ವಿಷಸ್ಯೌಷಧ" ಮೆಂ ||
ಬಂತಿರೆ ವಿದ್ಯೆಗಳಿಂ ಗೆ |
ಲ್ದಂ ತನ್ನಂ ಮುನ್ನೆ ಮೆಚ್ಚದೊಂ ಮೆಚ್ಚುವಿನಂ || ೬೨ ||

ವ|| ಅಂತಶ್ವಗ್ರೀವಂ ನಿರಾಯುಧನುಂ ನಿರ್ವಿದ್ಯನು ಮಾಗಿ ಕೆಲಸಂ ನೋಡಿ ತನ್ನ ದಕ್ಷಿಣ
ಪಕ್ಷದೊಳಿರ್ದ ಚಕ್ರಮುಂ:—

ಕಂ|| ಕೊಂಡಿಡೆ ಶಾರ್ಙಧರಂ ಕಡ |
ಗೊಂಡೊಂ ಕುಡುವಂತೆ ಮುಗುಳ್ದದಂ ಕೊಂಡಿಡೆ ತ ||
ಚ್ಚಂಡಾರಿಶಿರಂ ಸೆಂದರ |
ದುಂಡಿಗೆ ಧರೆಗೆಸಿಸಿ ಮುಂದೆ ಬಿೞ್ದುದು ಹರಿಯಾ || ೬೩ ||

ವ|| ಅಂತಶ್ವಗ್ರೀವನಂ ಕೊಂದು ತನ್ನ ಕೊಂದ ಕೊಳ್ಗುಳಕ್ಕೆ ಬಂದ ಸ್ವಯಂಪ್ರಭೆಗೆ ತ್ರಿಪೃಷ್ಠ ನಶ್ವಗ್ರೀವನ ಕಬಂಧಮುಂ ಸುಟ್ಟಿ ತೋಱಿ ನೋಡು ನೋಡೆಂದು:—

ಮಾಳಿನೀವೃತ್ತಂ|| ಬಲದ ಮದದ ಬಲ್ಲಾಳ್ತನ್ನ ಕೆಯ್ವುಟ್ಟಿ ನಿನ್ನಂ |
ಕೊಳಲು ಮದಿರದೆನ್ನೊಳ್ ಕಾದಲುಂ ಬಂದು ಚಕ್ರಂ ||
ಕೊಳೆ ಕೆಡೆದಿವ ನಶ್ವಗ್ರೀವ ನೀಯಟ್ಟಿಯಿಂ ದು |
ಚ್ಚಳಿಸಿದುದು ಶಿರೋಂಭೋಜಾತ ಮಂಭೋಜನೇತ್ರೇ || ೬೪ ||

ವ|| ಎಂದು ಮತ್ತಮಣ್ಮಿ ಸತ್ತರ ಗಂಡವಾತ ನುಪಮಾತೀತಂಮಾಡಿ ಪೊಗೞ್ದು ಕೊಳ್ಗುಳನಂ ಬೆಳಸಿ ತದ್ವಿದ್ಯಾಧರ ರಾಜಂ ಮೊದಲಾಗೆ ಕಾದಿ ಸತ್ತ ನೆಗೞ್ತೆಯ ಖೇಚರರ್ಗೆಲ್ಲಂ ಶರೀರ ಪೂಜಾಪೂರ್ವಕಂ ಸಂಸ್ಕಾರವಿಧಿಯಂ ನಿರ್ವರ್ತಿಸಿ ದಕ್ಷಿಣೋತ್ತರ ಶ್ರೇಣಿಗಳೆರಡುಮಂ ತನ್ನ ಮಾವಂ ಜ್ವಳನಜಟಿಗೆ ಕೊಟ್ಟು ತಾನುಂ ತ್ರಿಖಂಡ ಮಂಡಲಾಧಿಪತ್ಯಮಂ ತಾಳ್ದಿ ಪೌದನಪುರಮಂ ಪೊಕ್ಕು ಜಯಮೆಂಬ ಚಕ್ರರತ್ನಮಂ, ಶಾರ್ಙಮೆಂಬ ಚಾಪಮುಮಂ, ಮನೋಘಮುಖಿಯೆಂಬ ಶಕ್ತಿಯುಮಂ, ಜಯಾನಂದನೆಂಬ ಖಡ್ಗಮುಮಂ, ಕೌಮೋದಕಿಯೆಂಬ ಗದೆಯುಮಂ, ಪಾಂಚಜನ್ಯಮೆಂಬ ಶಂಖಮುಮಂ, ಕೌಸ್ತುಭಮೆಂಬ ಆಭರಣಮುಮಂ, ಪೂಜಿಸಿ ತಾನುಂ ಚಕ್ರವರ್ತಿಪದದೊಳ್ ವಿರಾಜಿಸಿ ಸುಖ ಮರಸುಗೆಯ್ಯುತ್ತಿರ್ದ ನನ್ನೆಗಂ:—

ಕಂ|| ಜ್ವಳನಜಟಿ ನಿಜ ಪುರೋಪವ |
ನಳೀಳೆ ಮಧುಮಾಸ ವಿರತಿಯೊಳ್ ಮುಸುಳ್ದಿರೆ ಕಂ ||
ಟಳಿಸಿದ ಮೆಯ್ವೆರ ಸಿಸಿಸಾ |
ಕುಳ ನಾದೊಂ ಬಗೆದು ನೋಡಿ ಸಂಸೃತಿ ವಿಧಿಯಂ || ೬೫ ||
ದಿವಸದೊಳೆ ತರುಗಳುಂ ಮಾ |
ರ್ದವಮುಂ ಕೆಯ್ಗೊಳ್ಗು ಮಲ್ಲದಂ ದೊಣಗುಗು ವಿಶಾ ||
ಭವವಾರಿಧಿಯೊಳ್ ಮುಳುಗಿದ |
ವಿವೇಕಶೂನ್ಯಂಗಸಾರ ಮಿಂತಿದೆ ಸಾರಂ || ೬೬ ||

ವ|| ಎಂದು ತತ್ವಭಾವನೆಗೆ ಮನಂದಂದು ರಾಜ್ಯದೊಳರ್ಕಕೀರ್ತಿಯ ನಭಿಷೇಕಪೂರ್ವಕಂ ನಿಱಿಸಿ ವಿನೇಯ ಜನಾಭಿನಂದ ರಪ್ಪಭಿನಂದನಗುರೂಪಾಂತದೊಳ್ ನಿಶ್ಚಳಿತತಪಶ್ಚರಣನಿರತನಾದೊಂ ತದಗ್ರ ಮಹಿಷಿ ವಾಯುವೇಗೆಯುಂ ಶ್ರೀಮತಿ ನಾಮಾರ್ಯಿಕಾ ಸಮೀಪದೊಳ್ ಮೋಕ್ಷಹೇತು ಭೂತ ಜೈನದೀಕ್ಷೆಯಂ ಕೆಯ್ಕೊಂಡ ಳದಂ ಕೇಳ್ದಿತ್ತ ವಿಜಯನ ನಾಥಿರಾಜ್ಯದೊಳ್ ನಿಱಿಸಿ:—

ಪೃಥ್ವೀವೃತ್ತಂ|| ಪ್ರಜಾಪತಿ ನೃಪಂ ಜಗತ್ಪತಿ ಪದಕ್ಕದರ್ಪಪ್ಪನೂ |
ನಜೈನ ಶುಭದೀಕ್ಷೆಯಂ ಮನದೆ ಕೊಂಡು ಕೈಕೊಂಡ ನಂ ||
ವಜೇಯ ಪಿಹಿತಾಸ್ರವಾಖ್ಯ ಮುನಿಮುಖ್ಯಪಾದದ್ವಯಾಂ |
ಬುಜಾಂತಿಕದೊಳಂತೆ ಭವ್ಯರಿರರೀ ಭವಾರಣ್ಯದೊಳ್ || ೬೭ ||

ವ|| ಅಂತು ಜಾತರೂಪಧರನು ಮಭಿಜಾತರೂಪ ಮನೋಹರನು ಮಾಗಿ ಮುಕ್ತ್ಯಂಗನಾ ಪಾಂಗ ಭ್ರೂಭಂಗ ಸಂಗ ಸಮೀಪ ನಪ್ಪುದುಂ:—

ಕಂ|| ಗಗನಚರ ಸಕಲ ಸಾಮ್ರಾ |
ಜ್ಯಗಾಮಿಯಪ್ಪರ್ಕಕೀರ್ತಿಗಂ ಜ್ಯೋತಿರ್ಮಾ ||
ಲೆಗ **ಮಮಿತತೇಜ** ನೆಂಬೊಂ |
ಮಗನಾದೊಂ ಖೇಚರೇಂದ್ರ ಬಗೆಗೊಳ್ವಿದಿದಂ || ೬೮ ||

ಎನ್ನಿಂ ಕಿಱಿಯಳ್ ಸಗ್ಗದ |
ಕನ್ನೆಯರಂ ಹಾವಭಾವ ವಿಭ್ರಮಗತಿಯಿಂ ||
ದನ್ನಗುವಳ್ ಮುದದಿಂ ಸಿರಿ |
ಯನ್ನಳಿನೆ ಸುತಾರೆ ಯೆಂಬ ಳಂಬರಗಮನಾ || ೬೯ ||

ಶ್ರೀವಿಜಯಂ ವಿಜಯಂ ನವ |
ಭಾವಜ್ಯೋತಿಃಪ್ರಭಾಖ್ಯೆ ಯೆಂಬರ್ ಮಕ್ಕಳ್ ||
ಮೂವರ್ ಕೊಂಡಾಟದ ಮಾ |
ದೇವಿಗಮಂದರ್ಧ ಚಕ್ರವರ್ತಿಗ ಮಾದರ್ || ೭೦ ||

ವ|| ಆಗಿ ಸುಖದಿಂ ಬಳೆಯೆ:—

ಕಂ|| ಧರೆಯಂ ಪಾಲಿಸಿ ಪದ್ಮೋ |
ದರ ನೆಣ್ಬತ್ತೊಂದು ಲಕ್ಕ ಬರಿಸಂ ಬಱ್ದಾ ||
ಪರಮಾಯುವ ತೌಕಲೊಳ |
ರ್ಧರಾತ್ರದೊಳ್ ಕಱಿದು ಸಪ್ತಮಾವನಿ ಗಿಱಿದೊಂ || ೭೧ ||

ವ|| ತದ್ವಿಯೋಗ ದುಃಖದೊಳ್ ಮಗಂ ಶ್ರೀವಿಜಯಂಗೆ ಪಟ್ಟಮಂ ಕಟ್ಟಿ ಪಿಹಿತಾಸ್ರವ ಗುರುಗಳ ಚರಣನಳಿನ ಸಮೀಪದೊಳ್:—

ಕಂ|| ರಾಜ್ಯಕ್ಕಂ ತ್ರಿಭುವನ ಸಾ |
ಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರ ಮೆಂ ||
ದಿಜ್ಯಾಪುರಸ್ಸರಂ ಪ್ರ |
ವ್ರಜ್ಯಮ ನಪಯುವದೆ ಹಲಧರಂ ಧರಿಯಿಪುದುಂ || ೭೨ ||

ವರಮುಕ್ತಿಪ್ರಮದೆ ಪತಿಂ
ವರೆ ಪುರುಷನ ನಜಿಸಿ ಕೊಳ್ವಪೋಲ್ ವಿಜಯಮುನೀ ||
ಶ್ವರನಂ ಕೆಯ್ಕೊಂಡಳ್ ದೇ |
ವರ ಪಲವುಂ ತೆಱದ ಪಜಿಗಳೊಡ ನೆಸೆವಿನೆಗಂ || ೭೩ ||

ವ|| ಅಂದರ್ಕ ಕೀರ್ತಿಯು ಮಮಿತತೇಜ ನಪ್ಪೆಸಗೆ ತನ್ನ ರಾಜ್ಯಮ ನಿತ್ತಭಿನಂದನ ಮುನಿಪ್ರಧಾನ ಪಾರ್ಶ್ವದೊಳಾಶಾಂಬರನಾದೊ ನಂದಿನ ಶ್ರೀಪಿಜಯನೈ ನೀಂ, (ನಿನ್ನ) ಚಕ್ರೇಶ್ವರರಾಜ್ಯ

ದೊಳ್ ನಿಂದು ಶ್ರೀಗಂ ವಿಜಯಕ್ಕಂ ಪೊತ್ತವೊದಲಿಗನಾಗಿಯೆ ಸಮಸ್ತ ರಾಜಕಮು ನೆಱಗಿಸಿ ಶ್ರೀ ವಿಜಯನೆಂಬ ಪೆಸರ ಸನ್ವರ್ಥಂ ಮಾಡಿ ಯಂದಿನ ನಿಸ್ನಪ್ಪ ಚಕ್ರವರ್ತಿಯ ತನಯಂ:—

ಕಂ|| ಜ್ಯೋತಿಃಪ್ರಭಾಸ್ವಯಂವರ |
ಜಾತೋತ್ಸವ ವಿಧಿಗೆ ಸಾನುಜಂ ಶ್ರೀವಿಜಯಂ ||
ಖ್ಯಾತಿಯ ರಾಜಕುಮಾರ |
ವ್ರಾತರ್ಕಳ್ಗಟ್ಟಿವೆರಸು ಬಟಿ ಯಟ್ಟುವುದುಂ || ೭೪ ||

ಮ|| ಕುಲಮುಂ ನಾಭಿತನೂಭವಂ ಮಹಿಮೆಯುಂ ಸತ್ಪಾತ್ರದಾನಂ ನಿರಾ |
ಕುಲಮುಂ ಜೀವದಯಾರಸಂ ವಿಭವಮುಂ ಪಂಚಾಂಗಮಂತ್ರಂ ಚತು |
ರ್ಬಲಮುಂ ಪ್ರಾಭವಮುಪ್ಪಿ ಮಾಡೆ ಪಡೆವಂ ನ್ಯಾಯಾನ್ವಿತಂ ತೊಟ್ಟನಾ |
ಬಲೆಗೊರ್ವಂ ತೆಗೆದಂತೆ ಬಂದುದು ವಯೋವಿಭ್ರಾಜಕಂ ರಾಜಕಂ || ೭೫ ||

ಕಂ|| ಎರೆಗೆಱಗುವ ಕಿಱುಪಿನಾಸಂ |
ತಿರೆ ಕನ್ಯಾಮಿಷಕೆ ರಾಜನಿಕುರಂಬಂ [ಬಂ] ||
ದಿರೆ ಬಯಸಿ ಬರಿಸಿದೊಂಸೋ |
ದರ ಮುಯ್ಯುನ ನಮಿತತೇಜನಂ ಶ್ರೀವಿಜಯಂ || ೭೬ ||
ಬಂದಮಿತತೇಜ ನುಪವನ |
ದೊಂದೆಡೆಯೊಳ್ ಬೀಡುವಿಡುವುದುಂ ಶ್ರೀವಿಜಯಂ ||
ಬಂದ ಸಿದಿರಂ ಹಿಮಾಂಶುಗೆ |
ಮಾಂದಿರದಿದಿರಪ್ಪ ತೆಱದಿ ನಂಬುಧಿ ಸಲಿಲಂ || ೭೭ ||

ವ|| ಅಂತಿದಿರ್ವಂದೊಡಗೊಂಡು:—

ಹರಿಣೀವೃತ್ತಂ|| ಪುಗಿಸೆ ಪೊಟಿಲಂ ಮುಂದಿಟ್ಟಾನಂದ ತೂರ್ಯರವಂ ಪಿಯ |
ದ್ದಿಗವನಿ ತಟೋಪಾಂತಕ್ಕಭ್ಯರ್ಣಮಾಗೆ ಸಮುಗ್ರವಾ |
ರ್ಧಿಗಳೆರಡೆನಲ್ ಮುಯ್ವಿತ್ತಾಮೆಯ್ದುನಿರ್ವರು ಮೊಪ್ಪಿ ಬೀ |
ದಿಗಳೊಳಗಣಿಂ ಬಂದುರ್ವೀಪಾಲ ಗೇಹಮು ನೆಯ್ದಿದರ್ || ೭೮ ||

ವ|| ಅಂದು ಬಂದಮಿತತೇಜಂ ಜೆರಸು ಶ್ರೀವಿಜಯಂ ರಾಜಭವನಮುಂ ಪುಗುವುದುಂ ಅದಱ ಕೆಲದೊಳ್ ಸಮ್ಮೇದ ಶಿಬಿರ ನಿವೇಶದೊಳಂಬರೇಚರರಾಜಂ:—

ಮಲ್ಲಿಕಾಮಾಲೆ|| ಬಗ್ಗವಳ್ಳಿಯ ಬಳ್ಗಿಗಾವಣ ದೋಳಿಯಿಂ ಸೊಗಯಿಪ್ಪ ಸೆ |
ವ್ಯಗ್ಗಪಾಕ್ಷದ ವಂಕದಾರವ ಕೇತಕಿಗರ್ಯನೊಂದಿ ನಿಂ ||
ದಗ್ಗಳಿಕ್ಕೆಯ ನಿಟ್ಟು ನಿಳ್ದ ನಿವೇಶದೊಳ್ ಮುವನಂ ಮನ |
ಕ್ಕೆಗ್ಗು ಪೊರ್ದದ ರೂಪಿನೊಳ್ ನೆಲಸಿರ್ಪವೋಲ್ ಸುಖ ಮಿರ್ದನಂ || ೭೯ ||

ಕಂ|| ಮನೆಗಾ ಶ್ರೀವಿಜಯಂ ಬಿ |
ದ್ದಿನ ನಲ್ಲಿಗೆ ರಾಜ ನಮಿತತೇಜಂ ವಲ ಮೆಂ ||
ಬಿನೆಗಂ ಶ್ರೀವಿಜಯಂ ವ್ಯೈ |
ದುನಂಗೆ ನಿಜಲಕ್ಷ್ಮಿಯಂ ನಿವೇದಿಸಿ ನೆಗಟ್ದಂ || ೮೦ ||

ಶಾ|| ಆನೀತಾಖಿಳ ರಾಜಲೋಕಮು ಸನರ್ಘಾಕಾರಮುಂ ಮಿಕ್ಕ ಕ |
ನ್ಯಾಮಾನೋಚಿತ ರತ್ನಮುಂ ತನಗೆ ಮಾಡಲ್ಕೆಂದು ಬಂದಿರ್ದ ನೀ ||
ಶ್ರೀನಾಥಂ ದಲ ಮೋಘಮೆಂಬ ಬಗೆಯಿಂ ಕಣ್ಣೊಳ್ ತೊಟಲ್ವಂದದಿಂ |
ದಾ ನಿದ್ರಾಂಗನೆ ಸೂಱೆಗೊಂದ ಇರುಳೊಳ್ ತತ್ಖೇಚರಾಧೀಶನಾ || ೮೧ ||

ಕಂ|| ಕರ್ಣಾಭರಣ ನಿಪೀಡಿತ |
ಪೂರ್ಣಾಂಸ ಸುಪಚ್ಛದಾಪಹೃತಕುಂಕುಮ ಸ ||
ಛ್ಛರ್ಣಪ್ರತ್ಯೂಷಂ ನಿ |
ದ್ರಾರ್ಣವದಾ ತಡಿಯ ನಮಿತತೇಜಂ ಕಂಡಂ || ೮೨ ||

ವ|| ಆಗಳ್

ಕಂ|| ಉಪ್ಪವಡಿಸುವುದು ಮಱಕೆಯ |
ಪಪ್ಪಕರೊಡನಾಡಿಗಳ್ ಪ್ರಬೋಧಿಸಿದರ್ ಮೇ ||
ಲಪ್ಪ ಪದರಚನೆಯಿಂ ದೊರೆ |
ಯಪ್ಪ ಮಹಾಮಂಗಳ ಪ್ರಬೋಧನೆಯಿಂದಂ || ೮೩ ||

ಒರ್ವಂ ಶ್ರೀವಿಜಯಂ ನೀ |
ನೊರ್ವಯ್ ಖಚರೇಶ ಪೊತ್ತು ನಿಂದಿರ್ ದೊರೆವೆ ||
ತ್ತುರ್ವೀಭರಮುಂ ಪೋದುದು |
ಶರ್ವರಿ ಬೆಳಗಾದು ದೇಟಿ ಶಯ್ಯಾತಳದೊಳ್ || ೮೪ ||

ವಾರಿಜಗಂಧಿ ವಿಭಾತ ಸ |
ಮೀರಂ ನಿಜಸುರಭಿ ನಿನ್ನಸುಯ್ಯದಱೊಳ್ ವೆಂ ||
ತೋರಂ ತಕ್ಕುಮೊ ಪರಗುಣ |
ಹಾರಿಗೆ ನಿಜಗುಣ ಮದೇಕೆ ಸಮನಿಸಿದಪುದೋ || ೮೫ ||

ಇರುಳಿನ ಸೂಱಂ ನಿದ್ರೆಗೆ |
ಸಿರಿ ಕೊಟ್ಟು ವಿಯೋಗಭರದಿ ನಿರೆ ಪಗಲಿನ ಸೂಱ್ ||
ಸಿರಿಗಾಗಲೆ ವೇಟ್ಪುದು ತಡ |
ದಿರ ದುಪ್ಪವಡಿಸು ವಿಯಚ್ಚರಾಂಬರ ಭಾನೂ || ೮೬ ||

ಪ್ರತಿಬುದ್ಧಂ ತ್ವನ್ಮುಖ ಮುಚಿ |
ತತಾರಕಂ ತುಂಬಿವೆರಸಿದಂಬುಜ ಮೆಂಬೀ ||
ದ್ವಿತಯಮು ಮೋಹೊಂದಂ ಪೋ |
ಲ್ತು ತೋಱೆ ಗತನಿದ್ರ ನಾಗು ನೀಂ ಜಿನಚಂದ್ರಾ || ೮೭ ||

ಭವದಾನನಕ್ಕೆ ಸೋಲ್ತಾ |
ತ್ಮ ವಿಲಾಸಮು ನುಱದ ತೆಱದೆ ರುಚಿಗೆಟ್ಟು ದಿಗಂ ||
ತ ವಿಲಂಬಿಬಿಂಬ ನಂಬುರು |
ಹನ್ವೈರದಿಂ ದುಡುಪ ನುಡಪ ನಾದಂತಾದಂ || ೮೮ ||

ಕಂ|| ದ್ರುಮಪಲ್ಲವ ತಳನಿಪತಿತ |
ಹಿಮಾಂಬು ಘುಟಿಕಾಳಿ ನಾಡೆ ಸೊಗಯಿಸಿದಪುದು ||
ತ್ತಮ ಭವದಧರ ಸ್ಥಿತದಂ |
ತ ಮರೀಚಿ ವಿಲಾಸ ಸರಸ ದರಹಸಿತ ನಿಭಂ || ೮೯ ||

ಮುದದಿಂ ದಿನ ನುದಯಂಗೆ |
ಯ್ಯದೆಯುಂ ಕಟ್ಟಿಱಿಯ ನರುಣ ನಲಿದೊಂ ನಿನ್ನ ||
ಭ್ಯುದಯದೊಳಾಂತರಿ ಸೇನೆಯ |
ನಿದಿರ್ಚಿ ತಲೆವಿಲ್ಲೆ ನೆರ್ಚಿಮ ತಪಿಸುವ ತೇಜದಿಂ || ೯೦ ||

ಉ|| ಬಾಳಮರೀಚಿಮಾಳಿ ಕಿರಣಾವಳಿಗಳ್ ಪೊಳೆ ದೀ ಸುಧಾತು ಶೈ |
ಲಾಳಿ ತಟಾಭಿಘಾತಮ ನೊಡಂಬಡಿಸುತ್ತಿರೆ ಪಕ್ಷಯುಗ್ಮನಿ ||
ದ್ರಾಳುತೆ ಬಿರ್ಚಿ ಬಳ್ಳಿಯುಲಿ ಪೆರ್ಚಿ ಮನಂ ಬಿಡೆ ಪೊಯ್ಯು ಕರ್ಣಮಂ |
ಲೀಳೆಯಿ ನೀಶ ನಿನ್ನ ಗಜರಾಜಿಗ ಳೆೞ್ದಪು ವಲ್ತೆ ಸೆಜ್ಜೆಯಿಂ || ೯೧ ||

ಕಂ|| ಭವದೀಯ ವನಾಯುಜ ಹಯ |
ನಿವಹಂ ಕೇಳ್ ಮೂರಿವಿಟ್ಟು ನಿಶ್ವಾಸಂ ಸೈಂ ||
ಧವಮಂ ಮಾಸಿಸೆ ಸೊಗಯಿಸಿ |
ತು ವಿನಿದ್ರಂ ದೇವ ದೀರ್ಘ ಪಟಮಂಡಪದೊಳ್ || ೯೨ ||

ವ|| ಎಂದು ವಂದಿವೃಂದಾರಕವೃಂದಂ ಅಭಿನಂದಿಸುವ ಮಂಗಳವಚನರಚನೆಗಳಿಂದಂ ಕುಮಾರ ನುರ್ವರಾಸ್ಯತಿಲಕಂ ಗಂಗಾಸಿಕತಿಳತಳದೊ ಳೊಱಗಿ ತದುದ್ದೇಶದಿಂ ಕಪಿಲಾಕರೇಣುವೆರಸಿ ಪುಂಡರೀಕ ಗಜಮೇೞ್ವಂತೆ ಸೂಱಿರಸಿವೆರಸು ಸೆಜ್ಜೆಯಿ ನೆೞ್ದು ಕುಳ್ಳಿರ್ದು ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ ಶ್ರೀ ವಿಜಯನ ಜಱಿ ಬರ್ಪುದುಂ ಕುಶಲವಿರಚಿತಾನುರೂಪ ವೇಷಭೂಷಣ ನಾಗಿ ರಾಜ ಸಮಾಜ ವಿರಾಜಮಾನಮಂ ಸ್ವಯಂವರಪ್ರದೇಶಮ ನೆಯ್ದಿ ವಂದು ಎರಡೋಳಿಯ ಚೌಪಳಿಕೆಗಳೊಳ ಮೋಳಿಯೊ ಳೆಯ್ದೆ :—

ಕಂ|| ಹರಿಪೀಠಸ್ಥಿತರಂ ಭಾ |
ಸುರ ರತ್ನಮರೀಚಿ ಮೇಚಕಿತ ತನುಗಳ ನಾ ||
ವರಜಿನಚಂದ್ರಂ ಕಂಡಂ |
ಸುರೇಂದ್ರ ವಿಭವರ ನಿಳಾಧಿರಾಜಾತ್ಮಜರಂ || ೯೩ ||

ವ|| ಕಂಡು ಮಂಚೋಭಯಾಂತರ ವೀಥಿಯೊಳಗನೆ ಬರ್ಪ ದೀನಜನತಾ ಕಲ್ಪಾಂಘ್ರಿಪನಂ:-

ಕಂ|| ನನೆಯ ಸರಲ್ಗಳುಮಂ ಕ |
ಬ್ಬಿನ ಬಿಲ್ಲುಮ ನೊಲ್ಲದಿಲ್ಲಿ ಗವತರಿಸಿ ದನಂ ||
ಗನ ನೆಯ್ದೆ ಕಾಣ್ಬವೋಲ್ ಕಂ |
ಡು ನೃಪಕುಮಾರರ್ ಸ್ವಯಂವರಾಶೆಯ ನುೞಿದರ್ || ೯೪ ||

ವ|| ಅಂತಸಿಬರ ಮಸಕ್ಕೆ ತಲ್ಲಣಂ ಬರ್ಪಂತೆ ಬಂದು ತನ್ನಂ ಮುಂದಿಟ್ಟು ಶ್ರೀವಿಜಯ
ಳ ಪೊತ್ತಮೊದಲ ಚೌಪಳಿಗೆಯುಂ ಮಣಿಮಯ ಸೋಪಾನ ಪಙ್ತಿಯಿಂದ ಮೇಲಾ ಶಿಲಾ
ಂಗಳಿಂದ ಮುತ್ತುಂಗನಗೋತ್ಸಂಗಮ ನೇಜುವ ಮೃಗರಾಜನಂ ಪೋಲ್ತು ಅಲ್ಲಿ ಪರಾರ್ಥ್ಯ ರತ್ನ
ತಾನೇಕ ಪರಿಪಿಷ್ಟರದ ಮೇಗೆ ಸಮಿರಾಚೀನ ನಾನಾವರ್ಣೋಪಚಿತಾಸ್ತರಣೋಪಪನ್ನ ಪ್ರಚ್ಛದಾ
ದಿತಾಸನದೊಳ್ ಕುಳ್ಳಿರ್ದು ರತ್ನಮಂಡನಾಯೋಗ ಪರಿಗೃಹೀತ ಸುರೇಂದ್ರ ಕರೀಂದ್ರ ಪೃಷ್ಠಗತ
ಮರೇಂದ್ರನನೆ ಪೋಲ್ತುಂ ಸೌಜನ್ಯ ಕಂದಾಂಕುರ ನಿರ್ಪುದುಂ:—

ಕಂ|| ಆರಾಜ ಪರಂಪರೆಯು ಶ |
ರೀರಂಗಳೊ ಳುರ್ವರಾಸ್ಯತಿಲಕನ ತೇಜಂ ||
ರಾರಾಜಿಸಿ ಪೋಲ್ತುದು ನವ |
ವಾರಿದ ನಿಕುರುಂಬದೊಳಗೆ ಪೊಳೆವೆಳಮಿಂಚಂ || ೯೫ ||

ವ|| ಅಂತನೇಕ ಸಿಂಹಾಸನ ಮಸ್ತಕಸ್ಥಿತ ರಾಜಕುಮಾರ ಮಧ್ಯದೊಳಧರೀಕೃತ ಸನತ್ಕುಮಾರ
ವೀರವಿದ್ಯಾಧರ ಕುಮಾರಂ ಕೈಗೆಯ್ಯೆ ಸೊಗಯಿಸಿ ನಾನಾವಿಧಕಲ್ಪಮಹೀರುಹಾರಾಮದೊಳಗಣ
ರಿಜಾತ ಮಿರ್ಪಂತಿರ್ಪಿನಂ:—

ಕಂ|| ನೆರವಿಯ ಕಣ್ಗಳ್ ನೃಪರನಿ |
ಬರುಮಂ ಬಿಸುಟುರ್ವರಾಸ್ಯ ತಿಲಕನೊಳೆರೆ ನೀ ||
ರರುಹಂಗಳ ನೊಲ್ಲದೆ ಚಂ |
ಚರೀಕತತಿ ಗಂಧಹಸ್ತಿಯೊಳ್ ನೆಲಸುವವೋಲ್ || ೯೬ ||

ಸ್ರ|| ಆಗಳ್ ಸೂತರ್ ಸ್ವಕೀಯಾಸ್ಯದ ದರಸುಗಳಂ ಬಣ್ಣಿಸುತ್ತಿರ್ಪಿನಂ ದಿ |
ಗ್ಭಾಗಂ ವಾಂಗಳ್ಕೈತೂರ್ಯಸ್ವನದೊಳೆ ಬಧಿರೀಭೂತ ಮಪ್ಪನ್ನೆಗಂ ಪೌ ||
ತ್ರೀಗಳ್ ಬರ್ಕೆಂಬುದುಂ ಶ್ರೀವಿಜಯನ ಮತದಿಂ ದೆಯ್ದೆ ಕೆಯ್ಗೆಯ್ದು ಮಾಗಳ್
ಬೇಗಂ ಜ್ಯೋತಿಃಪ್ರಭಾಕನ್ನಿಕೆ ಮಸಕದೆ ಕೊಳ್ವಾನೆ ಬರ್ಪಂತೆ ಬಂದಳ್ || ೯೭ ||

ವ|| ಅಂತು ರಥಮುಮಂ ಮನೋರಥಮುಮಂ ಪಿರಿದೆ ವಿವಾಹಮಂಗಳ ವೇಷಸನಾಥೆಯಾಗಿ
ಚಾಂತರ ರಾಜಮಾರ್ಗಮಂ ಪೊಕ್ಕು ಪ್ರತಿವರರುಮಂ ನೋಡಿ:—

ಕಂ|| ಆದಿಬ್ರಹ್ಮವಿಧಾನದಿ |
ನಾದತಿಶಯ ಸೃಷ್ಟಿಯೆನಿಸಿದಾ ಕನ್ನಿಕೆಗಿಂ ||
ದ್ರಾದಿ ನೃಪಮತಿಗಳಿರದಿದಿ |
ರ್ಪೋದುವು ತನುವಿರೆ ಮದೇಭರಿಪುಪಿಷ್ಟರದೊಳ್ || ೯೮ ||

ಆರಾಜಕುಮಾರರ ಶೃಂ |
ಗಾರಾಭಿನಯಂಗಳೊಡನೆ ನೆಗೞ್ದುವು ಪಲವುಂ ||
ವಾರುತ ಹತ ಮಹಿರುಹ ಶೋ |
ಭಾರುಚಿರಂಗಳ್ ಸ್ವಯಂವರಾಸ್ಥಾಯಿಕೆಯೊಳ್ || ೯೯ ||

ವ|| ಅಂತು ನಾನಾವಿಧ ಲೀಲಾವಿಲಾಸ ಸೌಂದರ್ಯ ಸಮನ್ವಿತ ವಿಭ್ರಮಾಭಿನಯಂಗಳನಂಗ ಶೈಲೂಷ ನುಪಾಧ್ಯಾಯನಾಗೆ ರಾಜಪುತ್ರಪಾತ್ರಂ ತಗುಳ್ದು ಮನ್ನಣೆಯಂ ಕೊಂಡಾಡಲೆತ್ತಿಕೊಂಡಲ್ಲಿ:-

ಕಂ|| ಲೀಲಾಬ್ಜಮಂ ಕರೋದ್ಧೃತ |
ನಾಲಮು ನಂತಃಪರಾಗ ಪರಿವೇಷಮು ನಾ ||
ಲೋಲದಲ ನಿಹತ ಮಧುಕರ |
ಮಾಲೆಯು ನೊರ್ವಂ ತಗುಳ್ದು ತಿರಿಪಿದ ನಾಗಳ್ || ೧೦೦ ||

ವ|| ಆತನು ಮಲ್ಲದೆ:—

ಕಂ|| ಸೊಗಯಿಪ ನಲ್ಲಳ ಘನಕುಚ |
ಯುಗಲಕ ಮೊಳ್ದೊಡೆಗ ಮೊದವಿ ದುಗುಟೊಳ್ ಪೊಂಗೇ ||
ದಗೆಯ ಪೊಸಗಱುಗಳಂ ಲೀ |
ಲೆಗೆ ಸೂಟಿಯೊಳ್ ಸೀಳಲೊರ್ವ ನುದ್ಯತ ನಾವಂ || ೧೦೧ ||

ವ|| ಆ ವಿಳಾಸ ವಿಶೇಷ ರಸರಾಶಿಯು ಮಲ್ಲದೆ:—

ಕಂ|| ಇಂಬಾಗಿರೆಯುಂ ಮಕುಟ ಮ |
ದಂ ಬಿಣ್ಪೆನೊಳೋರೆವೋದೊ ಡೋಸರಿಪವೊಲೊ ||
ರ್ವಂ ಬಹಳ ನಖಮಯೂಖ ಕ |
ದಂಬಕಮಂ ಕರಮ ನುತ್ತಮಾಂಗಕ್ಕೊಯ್ದಂ || ೧೦೨ ||

ವ|| ಆ ಮನೋಜರಾಗ ಹೇತುಭೂತ ರಾಜವಿದ್ಯಾವಿವೇಕನೆನಿಸಿದ ಮಹಾಪುರುಷನು ಮಲ್ಲದೆ:

ಕಂ|| ಎಡಗೆಯ್ಯನೂಱು ಪೀಠದ |
ಕಡೆಯೊಳ್ ಮುಯ್ವುದ್ದ ಮಾಗೆ ಮುರಿದ ಬೆಡಂಗ ||
ಚ್ಚುಡಿದಿರೆ ಹಾರಂ ಕೆಲಕೋ |
ರ್ಗುಡಿಸೆ ನಿಜಾನುಗರೊಳಾಗ ಳೊರ್ವಂ ನುಡಿದಂ || ೧೦೩ ||

ವ|| ಆ ಲೀಲಾಕುಂಭದಂಭೋಧಿ ಯಲ್ಲದೆ:—

ಕಂ|| ಹಾರದ ಲಂಬಣಮಂ ಕೇ |
ಯೂರ ಶಿಖಾಕೋಟಿಯೊಳ್ ತಗುಳ್ದ ನಿಭಹ ||
ಸ್ತೋರುಭುಜಂ ಸಾಚೀಕೃತ |
ಚಾರುವದನ ನೊರ್ವ ನಿರದುರಕ್ಕದ ನುಯ್ದಂ || ೧೦೪ ||

ವ|| ಆಹೃದಯಾಂಗಭೂಷಣನು ಮಲ್ಲದೆ:—

ಕಂ|| ಬಗೆ ಮುತ್ತೊಂದೆನೆಯುಂ ಗೆ |
ಯ್ವೊಗ ಮಿತ್ತೊಂದೆನೆಯು ಮಂಗುಳೀ ನಖಚಯಕಾಂ ||
ತಿಗಳ ನವಗಯ್ಸಿ ಸಲೆ ಪಾ |
ಸಗೆಯ ದೆಸೆದೆಸೆಗೆ ಪೊರಳ್ಚಿದಂ ಮುತ್ತೊರ್ವಂ || ೧೦೫ ||

ವ|| ಅನ್ನೆಗ ಮನವರತ ಸಂಧುಕ್ಷ್ಯಮಾಣ ಕಾಲಾಗುರುಧೂಪ ಧೂಮ್ರ ಸುರಭಿ ಪರಿಮಳ ಮಿಳದಳಿಕುಳಾಕುಳೀಕೃತ ಕನ್ಯಾಪರಿವಾರ ವಿಲಾಸ ವಿಲಾಸಿನೀ ವಿನೋದ್ಯಮಾನೆಯ ನಾಭರಣ ಪ್ರಭಾ ಪರಿಭೂತ ಪ್ರಭೂತ ಜ್ಯೋತಿಃಪ್ರಭೆಯಂ ಜ್ಯೋತಿಃಪ್ರಭೆಯಂ ಪ್ರತೀಹಾರಂ ಮಗಧಾಧಿರಾಜಾಭಿ ಮುಖಂ ಮಾಡಿ:—

ಮ|| ಶರಣಾಯಾತ ಶರಣ್ಯ ನಪ್ರತಿರಥಂ ರಾಜಾನ್ವವಾಯೈಕ ವಿ |
ಸ್ತರಣಂ ಮಾಗಧ ಕಲ್ಪಶಾಖಿ ಮಗಧಾಧೀಶಂ ಸಿತಚ್ಛತ್ರ ಚಾ ||
ಮರ ಸಿಂಹಾಸನ ಪಾಳಿಕೇತನ ಸಮುದ್ಯದ್ರಾಜ ಚಿಹ್ನಂ ಕರಂ |
ದೊರೆ ನೋಡೀತನ ನಿನ್ನ ರೂಪ ಕುಲ ಸೌಂದರ್ಯಂಗಳಬ್ಜಾನನೇ || ೧೦೬ ||

ಕ್ಷಿತಿನಾಥರ್ ಪಲರುಳ್ಳೊಡಂ ಬಗೆದು ಕೇಳ್ ನೀನಕ್ಕ ರಾಜಾನ್ವಯ |
ಸ್ಥಿತಿ ವಿಶ್ವಾವನಿ ಗೀತನಿಂದೆ ದೊರೆಯಾಯ್ತೆಂತೆನ್ನ ಸಜ್ಯೋತಿರು ||
ನ್ನತಿ ಋಕ್ಷಗ್ರಹ ತಾರಕಾನಿಕರದಿಂ ದೇನಾದುದೇ ರೋಹಿಣೀ |
ಪತಿಯಿಂ ದಾದುದು ರಾತ್ರಿಗಂಬುಜದಳವ್ಯಾಲೋಲ ಲೀಲೇಕ್ಷಣೇ || ೧೦೭ ||

ಕಂ|| ಅನುದಿನ ವಿಗಾಗತ ವೃಜಿನಂ |
ಜಿನೇಂದ್ರ ಪೂಜಾವಿಧಾನಮಂ ಮಾಡಿ ಮಹೇಂ ||
ದ್ರನುಮ ನೊಡನಿಱಿಸಿ ನಾಕಮ |
ನನಾಥ ವೆನಿಸಿದ ನನೂನಪೀನ ನಿತಂಬೇ || ೧೦೮ ||

ನೆರೆ ದೀತನೊಳವನಿಪ ಸುಂ |
ದರನೊಳ್ ಪುಗೆ ರಾಜಗೃಹ ಗೃಹಾಳಿ ಗವಾಕ್ಷಾಂ ||
ತರ ಕೃತ ಸರೋಜ ಮೆನಿಸುವ |
ಪುರಾಂಗನಾ ನಯನ ಸುಖಮ ನೊದವಿಸು ಸುದತೀ || ೧೦೯ ||

ವ|| ಎಂದ ಧಾತ್ರೀ ಪುತ್ರಿಯ ಮಾತನೆಯ್ದೆ ಕೇಳ್ದಾತನಂ ನೋಡಿ:—

ಕಂ|| ಪೊಱವನೆ ಭಾವಿಸ ದೇಱಿಯು |
ಮಿಱಿಯೆಯು ಮಾಗಳ್ ನಖಾಗ್ರ ವಾಲಾಗ್ರದಿ ನೊಂ ||
ದುಱಿಯ ದವಯವಮ ನವಯವ |
ಮುಱಿಯದು ಮೆನಿಸದೆ ಕುಮಾರಿ ನೋಡಿದ ಳಿನಿಸಂ || ೧೧೦ ||

ವ|| ನೋಡಿ:—

ಕಂ|| ವರನ ಕೊರಲಳವಿ ಗೆತ್ತಿ |
ರ್ದ ರತ್ನ ನವಮಾಲೆ ನೇಲೆ ನೆಲನಂ ನೋಡು ||
ತ್ತಿರೆ ಕನ್ನಿಕೆ ಧಾತ್ರಿಜೆಯಂ |
ತಿರದೆ ಕುಮಾರಿಕೆಯ ಮನದ ಪರಿಚಾರಿಕೆಯಂ || ೧೧೧ ||

ವ|| ರಥಮಂ ನಡೆಯಿಸೆಂಬುದುಂ:—

ಚಂ|| ತಡೆಯದೆ ಚಿತ್ರವೇತ್ರಧರೆಯುಂ ರಥಮಂ ಕ್ಷಿತಿಪಾಂತರಕ್ಕದಂ |
ನಡೆಯಿಸಿದಳ್ ಸವಿಾರಣ ಸಮುತ್ಥವಿಲೋಲ ತರಂಗಲೇಖೆ ಚೆ ||
ಲ್ವಿಡಿದ ಸರೋರುಹಾಂತರಕೆ ಮಾನಿತ ಮಾನಸ ರಾಜಹಂಸಿಯಂ |
ನಡೆಯಿಸುವಂತೆ ಸುಂದರನತಾಂಸೆಯ ನಲ್ಪಕಪೋಲಮಾಂಸೆಯಂ || ೧೧೨ ||

ಶಾ|| ಮತ್ತಿತ್ತಂ ಲಲಿತಾಂಗ[ನಂಗ] ವಿಷಯಾಧೀಶಂ ಸುರಸ್ತ್ರೀ ಜನೋ |
ದಾತ್ತಪ್ರಾರ್ಥಿತ ಯೌವನಂ ದಿವಿಜರಾಜತ್ವಂ ತರಾಸ್ಥಕ್ಕೆ ಮೆ ||
ಯ್ವೆತ್ತಿತ್ತೀಪರಮೇಶ್ವರಂಗೆ ಗಜಶಿಕ್ಷಾಸೂತ್ರದಿಷ್ಟಕ್ಕೆ ಮೂ |
ವತ್ತಿರ್ವರ್ ನಯಕಾರ ರೀತನ ಗಜವ್ರಾತಂಗಳಂ ತಿರ್ದುವರ್ || ೧೧೩ ||

ಕಂ|| ಅರಿಯುವತಿ ಬಾಷ್ಪ ಬಿಂದೂ |
ತ್ಕರಂಗಳಪಸೂತ್ರಹಾರಮಂ ಸ್ತನದೊಳ್ ಪೋ ||
ಲ್ತಿರೆ ತವಿಸೆ ಪಗೆವರಂ ಸಕ |
ಳ ರಾಜ್ಯಮಂ ವೀರಭೋಜ್ಯ ನೆನಿಸಿದ ನೀತಂ || ೧೧೪ ||

ಈತಂ ನಿಸರ್ಗಭಿನ್ನ ನಿ |
ಕೇತನಮಂ ಶ್ರೀ ಸರಸ್ವತೀದ್ವಯಮಂ ತಂ ||
ದೋತೊಂದೆ ಮೆಯ್ಯೊಳಿರಿಸಿದ |
ನೀತಪ ವಪದೊಳ್ ತೃತೀಯೆ ಯಾಗಿರು ನಿರುತಂ || ೧೧೫ ||

ಉ|| ಎಂಬುದು ಮಂಗರಾಜನೋಳಿದಿರ್ಚಿದ ಭಾವನೆ ಪೊಚ್ಚಮಾಗೆ ಹೇ |
ಮಾಂಬುರುಹಾಸ್ಯೆ ಸೋಲ್ಪುದೆನೆ ಕನ್ನಿಕೆ ಜನ್ಯೆಯ ನೊತ್ತೆ ಪೋಯ್ತು ಯಾ ||
ನಂ ಬಿಡದಾತನೊಳ್ ಸಹಸಮಾಗದು ಭಾವಕೆ ಕೂಟ ಮಾದುದಿ |
ಲ್ಲೀಂ ಬಗೆ ನಾಡೆ ಭಿನ್ನರುಚಿಯೋ ರಮಣೀ ರಮಣೀಯ ಸೃಷ್ಟಿಯಾ || ೧೧೬ ||

ಕಂ|| ದಾದಿಯು ಮಾ ಸುಕುಮಾರಿಕೆ |
ಗಾದರದಿ ನವಂತಿ ನಾಥನಂ ತೋಱದ ಳಿಂ ||
ದೂದಯ ಕಾಂತನ ನಹಿತನಿ |
ಷೂದನನಂ ದಿವಿಜರಾಜಲೀಲಾಸ್ಪದನಂ || ೧೧೭ ||

ಈತನ ಯಾನದೊಳಗ್ರ ಪ |
ದಾತಿ ಪದೋದ್ಧೂತ ಧೂಳಿ ಸಾಮಂತ ಶಿಖಾ ||
ನೂತಮಣಿ ತರಣಿ ಕಿರಣ |
ವ್ರಾತಕ್ಕಸ್ತಮಯ ಸಮಯಮಂ ಪುಟ್ಟಿಸುಗುಂ || ೧೧೮ ||

ಈ ನವಯೌವನ ನೊಡನೆ ಮ |
ನೋನಯನ ಶರೀರ ಸುಖಮ ನನುಭವಿಸುಗೆ ಶಿ ||
ಪ್ರಾನದಿ ಯೆರಡುಂ ತಡಿಯು |
ದ್ಯಾನಪರಂಪರೆಯೊಳತನುತನುತನುಲತಿಕೇ || ೧೧೯ ||

ವ|| ಎನೆಯುಂ:—

ಕಂ|| ಜ್ಯೋತಿಃಪ್ರಭೆ ಖರಕಿರಣ |
ಜ್ಯೋತಿಯೊಳೆಳಸದವೊಲೆಳಸಲೊಲ್ಲಳೆ ಸಮಭಿ ||
ದ್ಯೋತಿತ ಮಿತ್ರಾಬ್ಜನೊಳಭಿ |
ಜಾತಹಿತೋದಯನೊಳಂತವಂತೀಶ್ವರನೊಳ್ || ೧೨೦ ||

ತದನಂತರ ಮಿರದಾಕೆಯ |
ನುದಾತ್ತ ಧಾತ್ರೀ ತನೂಜೆ ಪರಿವಿಡಿಯೊಳ್ ತಂ ||
ದಿದಿರೊಳ್ ನಿಱಿಸಿ ತಗುಳ್ದು ನು |
ಡಿದಳ್ ಪ್ರಪಂಚಮ ನನೂಪ ವಿಷಯಾಧಿಪನಾ || ೧೨೧ ||

ಎರಡೆ ಭುಜಂ ಮನೆಯೊಳ್ ಸಾ |
ಸಿರನೆ ಭುಜಂ ಮೊನೆಯೊಳೀ ಮಹೀಪತಿ ಗರಸೆಂ ||
ಬೆರಡಕ್ಕರ ಮನ್ಯರೊಳ |
ರ್ಥರಹಿತ ಮನ್ವರ್ಥ ಮಿಾತನೊಳ್ ಮೃಗನಯನೇ || ೧೨೨ ||

ಬಗೆಯೊಳ್ ತನಗಹಿತಮ ನಾರ್ |
ಬಗೆದೊಡ ಮಾಗಳೆ ಕೃತಾಸ್ತ್ರ ನವರಿದಿರೊಳ್ ತೊ ||
ಟ್ಟಗೆ ನಿಂದು ಕೆಡಿಸುಗುಂ ಪ್ರಜೆ |
ಬಗೆ ಕಿಡೆ ದುರ್ಮತಿಯಿ ನಿಂತು ಸಿರಿಯರು ನೊಳರೆ || ೧೨೩ ||

ಕ್ಷಿತಿಪತಿ ಸುತೆ ನೀ ನೀಮಹಿ |
ಪತಿ ಯುತ್ಸಂಗಸ್ಥೆಯಾಗಿ ವಾತಾಯನ ಪ ||
ದ್ಧತಿವಿಡಿದು ನೋಡು ಮಾಹಿ |
ಷ್ಮತಿಗೆ ಕಟೀಸೂತ್ರ ಮಾದ ರೇವಾನದಿಯಂ || ೧೨೪ ||

ವ|| ಎನೆ:—

ಕಂ|| ಅತಿಸುಂದರ ನಿರತಿಶಯಾ |
ಕೃತಿಯಾಗಿಯು ಮಾತ ನಾಕೆ ಯೆರ್ದೆವುಗನೆ ಶರ ||
ದ್ಗತ ಜಲದ ಗಗನತಳ ವಿಲ |
ಸಿತೇಂದು ಸೊಗಯಿಸದ ತೆಱದಿ ನಬ್ಜನಿ ಗಿನಿಸಂ || ೧೨೫ ||

ಕಂ|| ನೃಪಪುತ್ರಿ ಶೂರಸೇನಾ |
ಧಿಪನಿದಿರೊಳ್ ರಥಿನಿ ನಿಲ್ವುದುಂ ಚತುರಕಳಾ ||
ಲಪನೆ ನೃಪೇಶ್ವರ ವರ್ಣನ |
ನಿಪುಣೆ ಪತಿಂವರೆಯ ಮುಂದೆ ನಿಂದಿಂತೆಂದಳ್ || ೧೨೬ ||

ವ|| ನಿನ್ನೀ ಪಯೋಧರ ಚಕ್ರವಾಕಯುಗಳಕ್ಕೀತನ ಭುಜೋರುಪಂಜರಮೆ, ನಿನ್ನೀ ರಂಭಾಸ್ತಂ ಭೋರುದಂತಿಗೀತನ ಕುಸುಮಶರ ಶರಧಿ ಪ್ರತಿನಿಧಿಯಾದೂರುಯುಗಲಾಲಾನಸ್ತಂಭಮೆ, ನಿನ್ನ ಸಕಳ ಕಳಾಧರ ಮಂಡಳೋಪಮಾನ ಗಂಡಭಿತ್ತಿಗೀತನ ದಿಙ್ನಾಗ ಕಪೋಲಫಲಕ ಪರಿಹಾಸಿಯೆನಿಸಿದ ಕಪೋಲಯುಗಳೋದಯಾಚಳಮೆ, ನಿನ್ನ ರಕ್ತಾಶೋಕ ಪಲ್ಲವೋಲ್ಲಾಸ ನಿವಾಸಿಯಪ್ಪಧರಪಲ್ಲವರುಚಿ ಗೀತನ ಕುಂದಕುಟ್ಮಳಾವಳಿ ಲೀಲಾವಲೇಪ ಲೋಪಿಯಪ್ಪ ಸುಲಿಪಲ್ಲೋಳಿಯೆ,ನಿನ್ನ ಹೇಮಲತಾವಿತಾ ನೋಪಮಾನತನುಲತಾಪ್ರತಾನದ ತಗುಳ್ಕೆಂಗೀತನನಲ್ಪಕಲ್ಪಪಾದಪೋಪಮಾನಾನೂನಾಂಗಯಷ್ಟಿಯೆ ದೊರೆ ಮತ್ತ ಮಾತಂ—

ಕಂ|| ನೀಪಕುಲನಾಗಿ ನೃಪತಿಲ |
ಕೋಪಮನೀತನನೆ ಸಾರ್ದು ಗುಣಗಣಮುೞಿದ ||
ತ್ತಾಪೊಪಮೋರ್ತಮ ನಘಕುಲ |
ಲೋಪಕನಂ ಪೊರ್ದಿ ಪಗೆಯ ಸುೞಿವಂತೆ ಜಗಂ || ೧೨೭ ||

ಅಂಗದ ತೊಲಗದ ಕಾಂತಿ ಮ |
ನಂಗೊಳಿಸುವು ದೀತನೋಲಗಂ ಗೊಟ್ಟರೆ ಸ ||
ಪ್ತಾಂಗದ ರಾಜ್ಯದ ತೇಜಮ |
ಸುಂಗೊಳಿಸುವು ದನ್ಯಮಂಡಲಾಧೀಶ್ವರರಂ || ೧೨೮ ||

ಈತನರಸಿಯರ ಕುಚಪರಿ |
ಧೂತ ಶ್ರೀಖಂಡ ಮುದುರೆ ಮಧುರೆಯೊಳಾ ಪೆ ||
ರ್ಮಾತಿನ ಕಳಿಂಗ ಸುತೆ ಗಂ |
ಗಾತರಳತರತ್ತರಂಗೆ ಯೆನೆ ಸೊಗಯಿಸುಗುಂ || ೧೨೯ ||

ಈ ವರಸುಂ ನೀನುಂ ನಾ |
ನಾವಿಧ ನವಕುಸುಮ ಶಯ್ಯೆಯೊಳ್ ರಮಿಯಿಸು ಬ್ಬಂ ||
ದಾವನದೊಳಿಂದ್ರವನಪರಿ |
ಭಾವಿಯೊಳಗಲದೆ ಸುಗಂಧ ಪಾಟಳಗಂಧೀ || ೧೩೦ ||

ಘನಸಮಯದೊಳಿರ್ದು ಶಿಲಾ |
ಸನದೊಳ್ ಶೈಳೇಯ ಸುರಭಿತಳದೊಳ್ ಗೋವ ||
ರ್ಧನ ಕಂದರದೊಳ್ ಶಿಖಿ ನ |
ರ್ತನಂಗಳಂ ನೋಡು ಮದನ ಮದಗಜಗಮನೇ || ೧೩೧ ||

ವ|| ಎನೆ ಮನಂದಾರದೆ—

ಕಂ|| ಅಂಗದವಿರಾಜಿ ಭುಜನ ಕ |
ಳಿಂಗೇಶನ ಮುಂದೆ ನಿೞಿಸಿ ನೃಪಕನ್ನೆಯ ನಿಂ ||
ತೆಂಗುಂ ಭುಜಿಷ್ಯೆ ಮದನನ |
ಭೃಂಗೀಧ್ವನಿ ತನ್ನ ದನಿಗೆ ಸಮ ನೆನಿಸುವಿನಂ || ೧೩೨ ||

ಖ್ಯಾತಂ ಮಹೇಂದ್ರಗಿರಿ ಸಾ |
ರಾತಿಶಯಂ ಪತಿ ಮಹೇಂದ್ರಗಿರಿಗಂ ಪ್ರಾಚೀ ||
ಸ್ರೋತಃಪತಿ ಪ್ರಯಾಣದೊ |
ಳೀತಂ ಜಂಗಮ ಮಹೇಂದ್ರ ಮೆನಿಕುಂ ಘಟೆಯಿಂ || ೧೩೩ ||

ಗುಣಹತ ಕರಯುಗ ಕಾಳಿಮ |
ಕಿಣಂಗ ಳೆಸೆದೀತನೊಳ್ ರಿಪುಶ್ರೀ ಪಿಡಿಪೆ ||
ತ್ತಣೆಯರ ಮಟಿಲೆ ಪನಿತಶೋ |
ಷಣ ಸಾಂಜನ ಬಿಂದುವೆಂಬ ಬಗೆಯಂ ಪಡೆಗುಂ || ೧೩೪ ||

ಚಂ|| ರವಜಿತ ಯಾಮತೂರ್ಯರವವಿಾಶನ ನಬ್ಧಿಯೆ ನಿದ್ರೆಯತ್ತಲು |
ಪ್ಪವಡಿಸುವಂತು ಮಾಟ್ಪುದು ಗವಾಕ್ಷ ನಿರೀಕ್ಷಿತ ವೀಥಿಮಾರ್ಗದೊಳ್ ||
ನವಯುವ ನೀತನೊಳ್ ನೆರೆದು ವಂದುಪವಾಂತ ಲವಂಗ ಪುಷ್ಪವ |
ತ್ಪವನವಿದಾರ್ಯಘರ್ಮಜಲವೆಯಾಗಿ ವಿಹಾರಿಸು ವಾರ್ಧಿ ತೀರದೊಳ್ || ೧೩೫ ||

ಕಂ|| ದೌವಾರಿಕೆ ಬಣ್ಣಿಸಿದೊಡ |
ಮಾವಧು ತನ್ನೃಪನ ನುಜಿದೆ ಪೋದಳ್ ಸಿರಿಯಂ ||
ಜೀವದ ಮತಿ ತರೆ ಪುಣ್ಯಾ |
ಭಾವದಿ ನದು ನೆಲಸಿ ತೊಲಗಿ ಪೋದಂತಾಗಳ್ || ೧೩೬ ||

ಆರಾಜಕನ್ನೆಯಂ ಪ್ರತಿ |
ಹಾರರವಸ್ಥಿತೆಯ ನುಯ್ದು ದಕ್ಷಿಣ ದಿಗಕೂ ||
ಪಾರಪತಿ ಯಿದಿರೊಳಿರಿಸಿ ಚ ||
ಕೋರಾಕ್ಷಿಯ ನಿತ್ತ ನೋಡು ನೋಡೆಂದಾಗಳ್ || ೧೩೭ ||

ಹರಿಚಂದನ ವಿಚ್ಛುರಿತಾಂ |
ಗರಾಗ ನತಿರುಚಿರಹಾರ ನೇನೆಸೆದನೊ ನಿ |
ರ್ಝರಮುಂ ಬಾಲಾತಪಮುಂ ||
ಬೆರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ || ೧೩೮ ||

ಭವದೀಯ ಪರಮಗುರು ಚ |
ಕ್ರವರ್ತಿ ದಿಗ್ವಿಜಯದೊಳ್ ಕರಂ ತಡೆವುದ ನೀ ||
ಭುವನೇಶಂ ಬಾಯ್ಕೇಳದೊ |
ಡವಂ ತಡೆಯದೊಂ ತ್ರಿಸ್ಪೃಷ್ಟ ನಂಬುಧಿ ತಟದೊಳ್ || ೧೩೯ ||

ಎಂತಾನುಂ ಸ್ಥಳಜಳದು |
ರ್ಗಂ ತವೆ ಬಾಯ್ಕೇಳ್ದೊ ನೀತ ನದೆ ದಿಗ್ವಿಜಯಾ ||
ತ್ಯಂತೋತ್ಸವ ಮದೆ ರುಚಿ ಚತು |
ರಂತಾವನಿಗದೆ ರಥಾಂಗ ವಿಜಯಾಂಗ ಫಲಂ || ೧೪೦ ||

ಕಂ॥ ಶ್ರೀಮಜ್ಜಿನಬಿಂಬಂ ಚೂ |
ಡಾಮಣಿ ಮಣಿಮುಕುಟದೊಳ್ ಕುಳಂ ವೃಷಭ ಜಿನ ||
ಸ್ವಾಮಿಕೃತಂ ನವವಯ ನಭಿ |
ರಾಮಂ ಸಮನೆಂಬರೇಂ ಸುಪುಣ್ಯನೊ ಪಾಂಡ್ಯಂ || ೧೪೧ ||

ಮ॥ ಮೃದುತಾಂಬೂಲ ಲತಾಪಿನದ್ಧ ವಿಲಸತ್ಪೂಗದ್ರುಮೌಘಂ ಸಮು |
ಚ್ಛ್ರಿದುರೇಲಾವ್ರತತೀಪರೀತ ವಿಪುಲ ಶ್ರೀಖಂಡ ಭೂಜಂ ತಮಾ ||
ಳದಳಪ್ರಸ್ತರಣಂ ಲತಾಂಗಿ ಮಳಯಕ್ರೀಡಾಚಳಂ ನೀನು ಮೀ |
ಮದನಾಕಾರನು ಮಲ್ಲಿ ನಿಚ್ಚಲು ಮಿರಿಂ ಕೇಳೀ ವಿನೋದಂಗಳಿಂ || ೧೪೨ ||

ಕಂ॥ ಹರಿನೀಲವರ್ಣ ನೀ ಸುಂ |
ದರತನು ನೀಂ ರೋಚನಾಭೆಯೊಳ್ ನೆರೆಯಲೊಡಂ ||
ಪರಭಾಗವಾಗಿ ನಿಮ್ಮ |
ರ್ಪಿರಪ್ಪ ಕಾರ್ಮುಗಿಲ ಮಿಂಚಿ ನಿರವಿನ ತೆಱದಿಂ || ೧೪೩ ||
ಅತಿ ದಿವಿಜೇಂದ್ರ ವಿಳಾಸನೊ |
ಳತಾಂತಮೀತನೊ ಳಡಂಗಿ ರತ್ನಾಕರಭೂ ||
ಷಿತೆಯಾದ ದಕ್ಷಿಣದಿಶಾ |
ಸತಿಗೆ ವಿಳಾಸವತಿ ಸವತಿಯಾಗಿರು ಸುಖದಿಂ || ೧೪೪ ||

ವ॥ ಎಂದೊಡಂ:—

ಕಂ॥ ದಿವಸಕರಾದರ್ಶನ ಬ |
ದ್ಧವಿವರ ನವವನಜದೊಳೆಡೆವಡೆಯದ ವರಕೈ ||
ರವಮಿತ್ರಕಿರಣದಂತವ |
ಳ ವಚನ ಮೊಳಪುಗದೆ ತನ್ಮನಃಪದ್ಮಿನಿಯೊಳ್ || ೧೪೫ ||
ಆವರ್ತನಾಭಿ ನಸುನ |
ಕ್ಕಾವರನಿಂದತ್ತಪೋದಳಧಿಕೇಚ್ಛೆಯೊಳ ||
ನ್ಯಾವನಿಪತಿಯೊಳ್ ತಡೆಗುಮೆ |
ದೇವಾಪಗೆ ತಡೆಯುಮೆಡೆಯೊಳಂಭೋಧಿವರಂ || ೧೪೬ ||
ಆ ವಧುವೊಲ್ಲದೆ ಬರೆ ಸಕ |
ಳಾವನಿಪರ್ ತಮ್ಮರಾಗ ಮೋಗಡಿಸಿರೆ ಕೆ ||
ಯ್ದಾವಿಗೆ ಬರೆ ಪೆಱಗಣ ಭವ |
ನಾವಳಿ ಮುಸುಳ್ದಂತೆ ಮುಸುಳ್ದ ರೆರಡೋಳಿಯೊಳಂ || ೧೪೭ ||

ಮ॥ ಸುದತೀ ಸ್ಯಂದನ ಮಾತ್ಮಮಂಚ ನಿಕಟಾಗ್ರೋದ್ದೇಶಮಂ ಮುಟ್ಟೆ ವ |
ರ್ಪುದು ಮಿನ್ನೆನ್ನುಮ ನೊಲ್ಗು ಮೊಲ್ಲ ಳಿವಳೆಂಬಾಶಂಕೆ ಪುಟ್ಟಿತ್ತು ಚಿ ||
ತ್ತದೊಳಾ ಬೇಗದೊಳುರ್ವರಾಸ್ಯ ತಿಲಕಂ ಗತ್ಯುನ್ನತಂ ದಕ್ಷಿಣಾಂ |
ಸದ ಬದ್ಧಶ್ಲಥ ಬಾಹುಕೀರ್ತಿ ಕಳಿದ ತ್ತಂದಾದ ಸಂದೇಹಮಂ || ೧೪೮ ||

ವ॥ ಅಂತು ದೀನಜನತಾಕಲ್ಪಾಂಘ್ರಿಪಸಂ ವನಕರಿ ಕದಡೆ ತಿಳಿದ ಸರೋವರದಂತೆ ಪ್ರಸನ್ನಾಂತರಂಗ ನಾಗಿರ್ಪನ್ನೆಗಂ ಕನಕ ದಂಡಹಸ್ತೆ ಯಾಗಳಿಂತೆಂದಳ್:—

ಉ॥ ಕ್ಷೋಣಿಗೆ ಹಾರವುಳ್ತೆ ರಜತಾದ್ರಿ ತದದ್ರಿಗೆಜಿಂಕೆ ನೋಡುಭ |
ಶ್ರೇಣಿಗ ಳಂತವಂ ವಿನಮಿಯುಂ ನಮಿಯುಂ ನಯದಾಳ್ದ ರುತ್ತರ ||
ಶ್ರೇಣಿಗಧೀಶ ರೊರ್ವ ನಹಿತಪ್ರತಿಪಾಲಕ ದತ್ತದಕ್ಷಿಣ |
ಶ್ರೇಣಿಯ ನಾಳ್ದೊ ನೊರ್ವ ನವರೊಳ್ ನಮಿವಂಶ ನಪಾರ ಪೌರುಷಂ || ೧೪೯ ||

ಕಂ॥ ಜ್ವಳನಜಟಿಯೆಂಬೊ ನಹಿತ |
ಜ್ವಳನಂ ಜಾಜ್ವಲ್ಯಮಾನ ಮಣಿಮುಕುಟಾಂಶೂ ||
ಜ್ಜ್ವಳ ಖೇಚರೇಂದ್ರ ಪರಿಷ |
ದ್ವಳಯಂ ನೋಡ ಳಸಮಿಳಿತ ಮುಗ್ಧಾಂಪಾಂಗೇ || ೧೫೦ ||

ಉ॥ ಆ ಗಗನೇಚರೇಂದ್ರನ ಮಗಂ ಪೆಸರಿಂ ನೆಗಟ್ದರ್ಕಕೀರ್ತಿ ಪಂ |
ಶಾಗತ ಖೇಚರೇಂದ್ರ ವಿಭವಂ ಭವದೀಯ ವಿನೂತಮಾತುಳಂ ||
ಭೋಗಪರಂಪರಾಪರಿಗತಂ ಮಗನಾ ವಿಭುಗಾಳ್ದ ಮು |
ಮ್ಯೋಗಿ ವಿರೋಧಿ ದರ್ಪಮಥನಂ ರಥನೂಪುರ ಚಕ್ರವಾಳಪಂ || ೧೫೧ ||

ಕಂ॥ ಅಪಗತ ಪತ್ರಲತಾವಳಿ |
ರಿಪುಯುವತಿಕಪೋಲಪಾಳಿ ಪೇೞ್ಗುಂ ನೆಗೞ್ದೀ ||
ನೃಪನ ನಿರತಿಶಯ ಶೌರ್ಯ |
ಪ್ರಪಂಚಮುಂ ಚಂಚರೀಕ ಸಮುಚಿಕುರಚಯೇ || ೧೫೨ ||

ವ॥ ಮತ್ತ ಮಾದಿವ್ಯಾನುಭಾವಂ:—

ಕಂ॥ ಐರಾವತ ಗಜಕುಂಭ |
ಸ್ಫಾರಣ ವಿಶ್ಲಥ ವಿಕಾಸಿ ಕೇಯೂರಂ ಕೇ ||
ಯೂರದೊಳೊರಸೆ ಸುರೇಂದ್ರನೊ |
ಳೋರಾಸನ ಮಿರ್ಪ ನರ್ಹ ದಾಸ್ಥಾಯಿಕೆಯೊಳ್ || ೧೫೩ ||

ಕುಲನಗಮು ನಡರ್ವ ಜಲನಿಧಿ |
ಜಲಮಂ ಪಾಯ್ವಹಿನಿವಾಸಮಂ ಪುಗುವ ಮರು ||
ನ್ನಿಲಯಕ್ಕೊಗೆ ವೀತನ ಕೀ |
ರ್ತಿಲತಾಂಗಿ ಚಲಾಂಗಿ ಖಚರ ನಚಳಿತ ನಬಲೇ || ೧೫೪ ||

ಬಾಲೆಗೆ ಗುಣಕಾಂತಿ ವಯೋ |
ಲೀಲೆಗೆ ವಿನಯಪ್ರಧಾನ ಗುಣಗಣೆಗೆಣೆ ಭೂ ||
ಪಾಲಂ ನಿನಗದಱಿಂ ದನು |
ಕೂಲಂ ಬಿದಿ ಬಿಸುಗೆ ಸಿಂಧುವೊಲ್ ಮಾನದಿಯೊಳ್ || ೧೫೫ ||

ವ|| ಎಂದಿಂತಾಕಾರಾನುರೂಪ ದೌವಾರಿಕಾ ವಚನರಚನಾಶ್ರವಣಸಮುಪಜಾತ ಸಾಧ್ವಸಭಯಮು ಮೆಱಕಮುಂ ಪೆರ್ಚಿ ಸಂಜಾತನೇಪಥು ಕರಪಲ್ಲವ ಪರಿಚ್ಯುತಸ್ವೇದೋದಬಿಂದು ಸಂದೋಹಸಿಕ್ತಾ ಪೂರ್ವಪ್ರವಾಳಾಂಕಮಧೂಕಮಾಲಾ(ಭಾ)ಪರಿಷ್ಕೃತಚಂಚತ್ಪಂಚರತ್ನಮಯದಾಮಾಭಿರಾಮಭಾಸ್ವ ಜ್ಜಿನಚಂದ್ರ ಚಂದ್ರಪ್ರಭೆಗೆ ಜ್ಯೋತಿಸೋಲ್ವಂತೆ ಜ್ಯೋತಿಃಪ್ರಭೆ ಸೋಲ್ತು:—

ಕಂ|| ಅವಯವ ಸಮುದಯ ಶೋಭಾ |
ನವದ್ಯ ನಪ್ಪೂರ್ವರಾಸ್ಯ ತಿಲಕೇತರನಂ ||
ನವವಧು ಪೊಲ್ಲಳೆ ಮಧುಕರಿ |
ನವಾಮ್ರದೊಳ್ ಪಾಯ್ಗು ಮೆಲವಮೊಳ್ ಪಾಯ್ದಪುದೇ || ೧೫೬ ||

ಆಕೆಯ ಮನಮುಱದಖಿಳಕ |
ಳಾಕೋವಿದ ಮಾನ್ಯೆ ಜನ್ಯೆ ವಿಸ್ತರವಚನ ||
ವ್ಯಾಕುಳತೆ ತಗುಳೆ ಪೊಗಟ್ದಳ |
ನೇಕೋಕ್ತಿಯಿ ನುರ್ವರಾಸ್ಯ ತಿಲಕನ ರೂಪಂ || ೧೫೭ ||

ಪೊಗಟ್ದಾಕೆ ಮಾಣೆ ನಾಣೆನಿ |
ಸಗಲೆ ನಯಂ ಬೀಱ ದಿಟ್ಟೆ ನೆಯ್ದಿಲ ಪೊಸವಾ ||
ಸಿಗದೊಳೆಣೆ ಯೆನೆ ಕುಮಾರನ |
ಸೆಗಲೊಳ್ ನೆಲೆ ನೆರೆಯೆ ಮಾಲೆ ನೂಡಿದ ತೆಱದಿಂ || ೧೫೮ ||

ವ|| ಅಂತೆಯ್ದೆ ಸೋಲ್ತು ಮಧಿಕಲಜ್ಜಾಭಾವದಿಂ ಮಾಲೆ ನೂಡಲಱಯದೆ ಕುಮಾರ ಗ್ರೀವಾ ಳೋಕನೆಯಾಗಿರೆ:—

ಕಂ|| ಮನಮುಱದು ನಗೆಯೊಳಾ ನೃಪ |
ತನಯೆಯು ರಥಮುಂ ನೃಪಾಂತರಕ್ಕುಯ್ವುದೊ ಪೇಟ್ ||
ಎನೆ ನೊಂದು ನಿಷಾದಿಗೆ ಮುಳಿ |
ದನಂಗ ನೃಪಯಾನ ನಾಗಮುಂ ವಧು ಪೋಲ್ತೆಳ್ || ೧೫೯ ||

ಕಣ್ಗಟತನದಿಂ ಪೇಟಲ್ |
ನಾಣ್ಚಿರೆ ತನ್ನೊಳಗ ನಬಲೆ ಪೊಱ ಪೊಣ್ಮೆದುದಾ ||
ಕಣ್ಚೆಲ್ಲದ ಬಳಸುವ ಕಡೆ |
ಗಣ್ಚಪಳತೆ ಯೊಡ ನಲಂಪು ಪೊಱಪೊಣ್ಮುವಿನಂ || ೧೬೦ ||

ವ|| ತದನಂತರಮಿರೆ:—

ಮ|| ನಯನಾನಂದನ ದಾಮಮಂ ಹಿಮಕರಾಂಶೂದ್ದಾಮಮಂ ಕನ್ನೆ ತ |
ನ್ನಯ ಕೆಯ್ಯೊಳ್ ಕುಡೆ ಮಾಲೆ ಪೂಡೆ ಸಮದಂ ಕಂಠಸ್ಥ ನಕ್ಷತ್ರ ಮಾ ||
ಲೆಯಿ ನೈರಾವತದಂತೆ ತತ್ಕರತಳಾಯಾತ ಸ್ಫುರದ್ರತ್ನ ಮಾ |
ಲೆಯ ನುದ್ಭಾಸಿಸಿದಂ ಸ್ವಯಂವರದೊಳಾ ಸೌಜನ್ಯಕಂದಾಂಕುರಂ || ೧೬೧ ||

— **ಗದ್ಯ** —

ಇದು
ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ
**ಶ್ರೀಮದುಭಯಕವಿ ಚಕ್ರವರ್ತಿ**
ನಿರ್ವರ್ತಿತಮುಂ
**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**
ತದನುಜಾತಾಭಿಜಾತ ಸಾರಸ್ವತ
ಪುನ್ನಮಾರ್ಯ ಕಾರಿತಮುಮಪ್ಪ
**ಪುರಾಣಚೂಡಾಮಣಿಯೊಳ್**
ಪಂಚಮಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.

## ಷಷ್ಠಾಶ್ವಾಸಂ.

ಕಂ|| ಶ್ರೀಪತ್ನೀಮೃದು ಭುಜಲತೆ |
ಕೋಪಮ ಮಾಮಾಲೆ ಕೊರಲೊಳಿರೆ ಕರ ಮೆಸೆದಂ ||
ಭೂಪತಿ ಕನ್ಯಾ ಬಾಹುಲ |
ತಾಪಾಶಾಶ್ಲೇಷತೋಷದಿಂ ಜಿನಚಂದ್ರಂ || ೧ ||

ಉ|| ನೀರದ ಮುಕ್ತ ಶೀತಕರನಂ ನವಚಂದ್ರಿಕೆ ಪೊರ್ದುವಂ ತಕೂ |
ಪಾರಮ ನಿಂದ್ರಸಿಂಧು ಪುಗುವಂತೆ ಸುರೇಭಮ ನಭ್ರಮೂಗಜ ||
ಸ್ತ್ರೀ ರಮಣೀಚ್ಛೆಯಿಂ ದೆಳಸುವಂತೆ ಸಮಾನವರಂಗೆ ಕನ್ನೆ ಕೆ |
ಯ್ಸಾರೆ ಕನಲ್ದೊನಲ್ದುಮ ಮನಂ ನೆರೆದಿರ್ದ ಸುರೇಂದ್ರಯೂಥದಾ || ೨ ||

ಕಂ|| ಪರಸುವ ಪೌರರ ಪರಕೆಯ |
ಸರಂ ಶ್ರವಣಶೂಲಮಾಗಿ ಕಿವಿಯೊಳ್ ಪುಗುವಂ |
ತಿ[ರೆ] ಕಿವಿಯಂ ಪುಗೆ ನೆರೆದರ |
ಸರ ಮಕ್ಕಳ್ ವಿರಸರಾದ ರಾಸಂಕಟದೊಳ್ || ೩ ||

**ವ||** ಅಂತು ನಡುವಗಲ (ಕಂಜ)ಕುಮುದವನದ ವಿಕಾಸಕ್ಕಮ ವಿಕಾಸಕ್ಕಂ ನೆಲೆಯಾದುಭಯ ಪಕ್ಷರಾಜಲೋಕದನುಜೀವಿಲೋಕದ ಪುರನಾರೀಜನಂಗಳೊಳ್ತಳ್ತೊಳಂ ಮಾಣ್ಬುದುಂ ಮಂಚಸ್ಥ ರಾಜನ್ಯಕಮುಂ ಶ್ರೀವಿಜಯಂವಿಸರ್ಜಿಸೆ ಪ್ರತ್ಯೂಷತಾರಕಾಕಾರದಿಂ ಮಂದಮಂದಾಯಮಾನಪ್ರಭಾ ಪ್ರಸರಂ ತಮ್ಮ ತಮ್ಮ ಶಿಬಿರ ನಿವೇಶಂಗಳ್ಗೆ ಪರೆದು ಶ್ರೀವಿಜಯನೊಳ್ ಮುರ್ವರಾಸ್ಯ ತಿಲಕನೊಳ್ ಮುನಿಸಿಜರ್ ನೆರೆದುಂ ಕಾದಿಯುಂ ನೊದವಲಾಱದುದಱಿಂ ನೋಱಿಯೊಳಗಣ ಕೂರಸಿಯಂತೆ ಕೂಪ್ರ- ಗಿಡದೆ ಸೌಜನ್ಯಮ ನುಂಟುಮಾಡಿ ನಿಜದೇಶ ಪ್ರಸ್ಥಾನಾಭಿಮುಖರ್ ಅಂತಸ್ಥ ಕೋಪಾವಲೇಪರ್ ಬಹಿಃಪ್ರಮೋದಂಗಳಿಂ ಸಂವೃತಾಕಾರರ್ ಗೂಢ ನಕ್ರ ಪ್ರಸನ್ನ ಹ್ರದಗಳಂತೆ ಪಯಣಂ ಬೋದರ್. ಇತ್ತ ಪಾಪೇಭಕಂಠೀರವಂ ಕಂಠೀರವ ವಧೂಪ್ರಭೆಯುಂ ಜ್ಯೋತಿಃಪ್ರಭೆಯ ನುಪಾಯನ ಸಮೇತ ಮಪ್ಪ ನೃಪವಿದ್ಯೆಯುಂ ಮುಂದಿಟ್ಟು ಪುಗುವಂತೆ ಪೊಱಲಂ ಪುಗೆ:—

ಉ|| ಆಯತ ರಂಗವಲ್ಲಿ ಪರಿಶೋಭೆಯ ನಂಚಿತ ಚಾರು ಕೀರ್ಣ ಪ |
ರ್ಣಾಯುಧ ಪಾಳಿತೋರಣ ವಿರಾಜಿತಮುಂ ಬಹುರತ್ನ ಕೇತನ ||
ಚ್ಛಾಯ ನಿವಾರಿ ತೋಷ್ಣಮ ನನಿಂದಿತ ಸುಂದರ ರಾಜಮಾರ್ಗಮುಂ |
ಶ್ರೀಯ ನಿವಾಸಮುಂ ಪುಗೆ ನೃಪೇಶ್ವರ ಕನ್ಯಕೆಯುಂ ಕುಮಾರನುಂ || ೪ ||

ಕಂ|| ಆತನ ನಾಗಳ್ ನೋಡುವ |
ಕೌತೂಹಳದಿಂ ಸುಧಾಗೃಹಾಗ್ರಂಗಳೊಳಿ ||
ರ್ದಾತರಳೇಕ್ಷಣೆಯರ್ಕಳ್ |
ವಾತಗವಾಕ್ಷಂಗಳೆಡೆಗೆ ತಡೆಯದೆ ನಡೆದರ್ || ೫ ||

ವ|| ಅಂತು ವಿಶ್ವಕರ್ಮನಿರ್ಮಿತ ನವಕರ್ಮ ಜಾಳಾಂತರಂಗಳೊಳ್ ಕುವಳಯಿತಂಗಳಾಗಿ ತೊಳಗಿ ಪೊಳೆವ ಬೆಳಿಯ ನಿಡಿಯ ತುಱುಗೆವೆಗಣ್ಗಳಿಂ ಪೌರವಾರವಿಳಾಸಿನೀ ಜನಂಗಳ್ ಪರಿತ್ಯಕ್ತಾನ್ಯವ್ಯಾಪಾರರಾಗಿ ಬಹಿರಂತಃಕರಣಂಗಳಿ ನಕಳಂಕಾಚಾರಸಾರನನೆ ಲಕ್ಷ್ಯಂ ಮಾಡಿ ನೋಡುವಲ್ಲಿ ಯೊರ್ವಳ್:—

ಕಂ|| ಮುಡಿ ಬಿಟ್ಟೊಡದುವ ನವಯವ |
ದೆಡೆಗೆಯ್ಯೊಳ್ ಪಿಡಿದು ಮುಡಿಯಲುಂ ಮಱೆದು ನಯಂ ||
ಕಡೆಗೋಡಿವೋಗೆ ಕಣ್ಣೊಳ್ |.
ಬೆಡಂಗೊಡಂಬಡೆ ಮೃಗಾಕ್ಷಿ ಪರಿದೀಕ್ಷಿಸಿದಳ್ || ೬ ||

ಇಂಬಿನೊಳಡಿಯೂಡುವ ಸಖಿ |
ಯಂ ಬಾರಿಸಿ ತೆಗೆದು ಕಾಲ ನೊರ್ವಳ್ ನೋಟ್ಪಾ ||
ಡಂಬರ ದಡಿಯಿಟ್ಟು ಗವಾ |
ಕ್ಷಂಬರ ಮಲತಗೆಯ ಪಜ್ಜೆಯಂ ಪಸರಿಸಿದಳ್ || ೭ ||

ಎಡಗಣ್ಣೊಳೆಚ್ಚಿ ದಂಜನ |
ಮೊಡಂಬಡೆನೆ ಬಲದ ಕಣ್ಣೊಳೆಚ್ಚದೆ ಕುಡುಪಂ ||
ಪಿಡಿದು ಗವಾಕ್ಷಕ್ಕೊರ್ವಳ್ |
ನಡೆದಳ್ ನೋಡಲ್ಕೆ ವಿನಯ ಕಲ್ಪಾಂಘ್ರಿಪನಂ || ೮ ||

ನಡೆಯೆ ಚಟುಳತೆಗೆ ಕಣೆಯಂ |
ಸಡಿಲ್ದೊಡದ ನೆಡದ ಕೆಯ್ಯೊಳೋಸರಿಸುತ್ತುಂ ||
ನಡೆವು ಗವಾಕ್ಷಂಬರ ಮೋ |
ಗಡಿಸದೆ ನವವರನ ನಬಲೆ ನೋಡಿದ ಳೊರ್ವಳ್ || ೯ ||

ಅರೆಗಟ್ಟೆ ತುರಿಪದಿಂ ಪರಿ |
ತರೆ ಮೇಖಲೆ ಸೋರ್ದು ಕಾಲ್ಗೆ ವರೆ ಮದನ ಮದೋ ||
ದ್ಧುರಗಂಧಗಜಂ ನಿಗಳಂ |
ಬೆರಸಿರ್ಪ್ಪಂತಿರ್ದು ನೋಡಿದಳ್ ಪೆಱ ಳೊರ್ವಳ್ || ೧೦ ||

ಕನದಖಿಳ ಕನಕ ವಾತಾ |
ಯನಂಗಳೊಳ್ ಸುರಭಿ ಗಂಧಗರ್ಭಂಗಳ್ ಸೂ ||
ತನ ನಯನ ಪದಯುಗಂಗಳ್ |
ಕನಕ ಸರೋಜಂಗಳಾದು ವವರ ಮೊಗಂಗಳ್ || ೧೧ ||

ವ॥ ಅಂತು ಸೌಜನ್ಯ ಕಂದಾಂಕುರನ ಲಾವಣ್ಯರಸಮಂ ಕಣ್ಗೊಳ್ ಪೀರ್ವಂತೆ ನೋೞ್ಪ ನಗರ ವಾರ ವಿಲಾಸಿನಿಯರ ಮತ್ತಿಸಿಂದ್ರಿಯ ಪ್ರಪಂಚಂಗಳೆಲ್ಲಂ ಚಕ್ಷುರಿಂದ್ರಿಯಮನೆ ಪೊಕ್ಕುೞ ಮುೞಿದ ವಿಷಯಯೋಗಂಗಳ ನಱಿಯದೇಕೇಂದ್ರಿಯ (ಭೂತ) ಚೂತಲತಾಕಾರಮಂ ಕೆಯ್ಕೊಂಡು ಬಿಲ್ಲುಂ ಬೆಱಗು ಮಾಗಿ ನೋಡೆ ವಧೂವರರ್ ಬರೆವರಿ:—

ಕಂ॥ ಆದ ಸೊಯಂಬರಮಂ ಜಗ |
ದಾದಿಯ ನೃಪರಮಿತಮತಿಗಳಿದ ನೊಳ್ಳಿತ ಸು ॥
ತ್ಪಾದಿಸಿದ ರಲ್ಲದಂ ದುದಿ |
ತೋದಿತನಂ ವರನ ನೀಕೆ ಪಡೆಗುಮೆ ನೃಪರೊಳ್ ॥ ೧೨ ॥

ವ॥ ಅದಲ್ಲದೆಯುಂ "ಸಮವಯೋರೂಪ ಲಾವಣ್ಯಪುಣ್ಯಮ ನೀಪ್ಪಂದ್ವಮಂ ಕೂಡಿದ ಬಿದಿಗಮರಂ ಪುಟ್ಟಿಸಿದ ಮಹಾಪ್ರಯತ್ನಂ ಸಫಲಮಾದುದು. ಈ ರಾಜಸಹಸ್ರದೊಳೀಕೆ ತನಗನುರೂಪನಪ್ಪನ ನಱಿದು ಮಾಲೆ ಯೂಡಿದಳ್, ಉನ್ನಮೆ ಪುರಾತನ ಭವಸಂಬಂಧವೇದಿಸಿ" ಎಂದಿಂತರ್ಥಭೂತಂಗಳನೆನಿತಾನುಮಂ ನುಡಿವನಾಗರಕಶ್ರೋತ್ರಸುಖಮುಖರವಾರ್ತಾಮೃತಾಕ್ಷರಂಗಳಂ ಕೇಳುತ್ತುಂ ಮಂಗಳವಿಧಾನಾಧಾನ ಸನಾಥಿ ಭವನಮಂ ಪೊಕ್ಕು ಕುಮಾರನಂ ಮುನ್ನಂ ಹುತಾಗ್ನಿಯಾಗಿರ್ದ ಪುರೋಹಿತನ ನಿದಿರ್ಗೊಂಡಗ್ನಿಸಾಕ್ಷಿಯೊಳ್ ಜ್ಯೋತಿಃಪ್ರಭೆಯಂ ಯಥೋಕ್ತವಿಧಿಪೂರ್ವಕಂ ಕುಡುವುದುಂ:—

ಶಿಖರಿಣೀವೃತ್ತಂ॥ ವಧೂಕಾಂತರ್ ಪಾಣಿಗ್ರಹಣ ವಿಧಿಯೊಳ್ ರಾಗವಿಸರರ್ |
ಸುಧಾಸಿಕ್ತಾಶೋಕವ್ರತತಿಯು ಮಶೋಕಾವನಿಜಮುಂ ॥
ಮಧುಶ್ರೀಯೊಳ್ ತಳ್ತಿರ್ಪವು ತಳಿರ ತಳ್ಪಿಂದೆನಿಸಿದ |
ಪ್ರದಾನಾಸಂಗೇಭಂ ಬೆದಱಿ ನೆರೆದಿರ್ದಂ ಮದುವೆಯೊಳ್ ॥ ೧೩ ॥

ಕಂ॥ ಸುಕುಮಾರ ಕುಮಾರನ ಕಂ |
ಟಕಿತಾಂಗಪ್ರಕೃತಿಗಂ ವಧೂಸ್ವಿನ್ನಾಂಗ ॥
ಪ್ರಕೃತಿಗ ಮನಂಗನೇಂ ಪ |
ಚ್ಚಿ ಕೊಟ್ಟನೋ ಬೇಱೆ ವೇಱೆ ರಸಮಂ ಪಸೆಯೊಳ್ ॥ ೧೪ ॥

ವ॥ ಎಂದುರ್ವರಾಸ್ಯತಿಲಕ ಪ್ರಮೋದೋದಯಮುಮಂ ಜ್ಯೋತಿಃಪ್ರಭೆಯ ಲಜ್ಜಾಪ್ರಾದುರ್ಭಾವಮುಮಂ ಭಾವುಕರ್ ಭಾವಿಸಿ ಬೇಱೆ ವೇಱೆ ಮೆಚ್ಚಿ ಪಚ್ಚು ಪೊಗೞೆ ಮತ್ತಂ:—

ಕಂ॥ ಓರೊರ್ವರ ಕಣ್ಗಳ್ ಸಂ |
ಚಾರಿ ಕಟಾಕ್ಷೇಕ್ಷಣಂಗಳಲೆದುವು ಲಜ್ಜಾ ॥
ಪ್ರಾರಂಭಮ ನನ್ಯೋನ್ಯ ವಿ |
ಸಾರಿ ನವಪ್ರಣಯದಿಂ ಕ್ರಿಯಾವಿರಮಣದೊಳ್ ॥ ೧೫ ॥

ವ॥ ಇನಿಸಾನುಂ ಬೇಗದಿಂ:—

ಕಂ॥ ಉರಿವಗ್ನಿಕುಂಡಮಂ ಬಲ |
ವರೆ ದಂಪತಿ ಕನಕಶೈಲಮಂ ಬಳಸುವ ವಾ ॥
ಸರದಿರುಳ ತೆಱನ ನಿರವನು |
ಕರಿಸಿದುದಾಗಳ್ ತದೀಯ ಮಹಿಮಸಹಿತ್ವಂ ॥ ೧೬ ॥

ವ|| ಅಂತಲ್ಲಿಂ ಬೞಿಯಂ:—

ಕಂ|| ಪ್ರಮದ ಪುರೋಹಿತ ವಚನ |
ಪ್ರಮಾಣದಿಂದಗ್ನಿಕುಂಡದೊಳ್ ಲಾಜೆಯುಮಂ ||
ಕ್ರಮದಿಂದ ಮಿಕ್ಕಿದಳ್ ಪೆಣೆ |
ದ ಮನಃಪ್ರಣಯಕ್ಕೆ ಮುಡಿಗೆ ಯಿಕ್ಕುವ ತೆಱದಿಂ || ೧೭ ||

ಅಲ್ಲಿಂದಂ ಲಾಜಶಮೀ |
ಪಲ್ಲವ ಶುಭಗಂಧಿ ನೆಗೆದ ಪೊಗೆ ಸೊಗಯಿಸಿತು ||
ತ್ಫುಲ್ಲಾಬ್ಜಾಸ್ಯೆಯ ನವಯುವ |
ಪಲ್ಲವದ ವತಂಸಮೆನಿಸಿ ಗಂಡದ್ವಯದೊಳ್ || ೧೮ ||

ವ|| ಆಗಳಾಚಾರಧೂಪಗ್ರಹಣಾಂಜನಕ್ಲೇದ ಸಮಾಕುಲಾಕ್ಷಿ ಪರಿಮ್ಲಾನ (ತಾ) ಬೀಜಾಂಕು (ರೀಭೂತ) ರ ಕರ್ಣಪೂರ ಪಾಟಳಗಂಡರೇಖಮುಖಮಂಡಳೆ ಜ್ಯೋತಿಃಪ್ರಭೆಯೊಂದು ಲೀಲಾಲಕ್ಷ್ಮಿಗಾವಾಸಮಾಗಿರೆ ಸೌಸ್ನಾತಿಕರುಂ, ಬಂಧುಸಹಿತಂ ಶ್ರೀವಿಜಯನುಂ, ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾರ್ದ್ರಾಕ್ಷತಾರೋಪಣಂ ಗೆಯ್ದರ್:—

ಉ|| ಶ್ರೀವಿಜಯಂ ವಿವಾಹಮನೊಡಂಬಡೆ ತಂಗೆಗೆ ಮಾಡಿ ಬೀಡಿದಂ |
ಗೀವುದನಿತ್ತು ಖೇಚರಮಹೀಚರಕೋಟಿಗೆ ಬಾಯಿನಂಗಳಂ ||
ತೀವಿದ ಶೇಷಕೋಶಗೃಹಮುಂ ಬಱಿದಾಗಿರೆ ಕೊಟ್ಟು ತನ್ನನಿ |
ತ್ತೋವದೆ ಮೈದುನಂಗೆ ಮೆಱೆದಂ ನೆರೆದನ್ವಯದೊಂದು ಮೈಮೆಯಂ || ೧೯ ||

ಕಂ|| ಬೞಿವೞಿಯೆಂಬುದು ಬಡವಂ |
ಗೞಿಪಂಗೇಂ ಮುಟ್ಟೆ ಖಚರಕೇತುಗೆ ಸಿರಿ ಪೋಂ ||
ಪುೞಿವೋದ ರೂಪ್ಯಗಿರಿಕುಳ |
ಪೞಿಯಿಂದಂ ಬಂದ ಕೋಶಗೃಹಮಂ ಗೃಹಮಂ || ೨೦ ||

ವ|| ಅದಱಿಂದಂ ತಮ್ಮುತಿರ್ವರ ತಳೆ ಬೞಿವೞಿಯೆಂದು ಶ್ರೀವಿಜಯನುಂ ವಿಜಯನುಮುರ್ವರಾಸ್ಯತಿಲಕನುಮಂ ಜ್ಯೋತಿಃಪ್ರಭೆಯುಮಂ ಕೞಿಪಲ್ ಮೂಱು ಪಯಣಮೊಡವೋಗಿ ತಮ್ಮಂ ಬೆರಸು:—

ಕಂ|| ಶ್ರೀವಿಜಯನತ್ತ ಮಗುೞ್ದನ |
ಮಾವಾಸ್ಯೆಯೊಳೊಡನೆ ನಡೆದು ಕಡೆಯೊಳ್ ರವಿ ರಾ ||
ಜೀವರಿಪುವಿಂದಗಲ್ವವೊ |
ಲಾವಿರ್ಭೂತ ಪ್ರತಾಪನಧಿರೂಢರಥಂ || ೨೧ ||

ವ|| ಅಂತು ಚಕ್ರವರ್ತಿ ತನೂಜಂ ಕಳಿಪಿ ಮಗುೞ್ವುದು ಮತ್ತ ಕತಿಪಯದಿನಂಗಳಿಂ:—

ಚಂ|| ಜಲಜಸರಸ್ತಟಂಗಳೊಳಶೋಕಮಹೀರುಹ ರಮ್ಯಭೂತಳಂ |
ಗಳೊಳನವದ್ಯ ನದ್ಯುಭಯ ತೀರದ ಸೈಕತ ಮಾಧವೀಗೃಹಂ ||
ಗಳೊಳಿಡೆಮಾಡಿ ಬೀಡುವಿಡುತುಂ ಖಚರೇಶ್ವರ ನೆಯ್ದಿದಂ ನಿರಾ |
ಕುಳಗತಿ ಲೀಲನಪ್ರತಿರಥಂ ರಥನೂಪುರ ಚಕ್ರವಾಳಮಂ || ೨೨ ||

**ವ||** ಎಯ್ದೆ ಪೊೞಲ ನಾಗಳಪ್ಪಶೋಭೆಗೆಯ್ಸಿ ಮಹಾವಿಭೂತಿಯಿಂ ಪೊಕ್ಕನವರತಂ ವಿಷಯ ಸುಖ ನಿರತನಾಗಿ ಮಿತದಿನಂಗಳ ನಮಿತತೇಜನಿರ್ದು ತನ್ನ ತಂಗೆಯ ಸುತಾರೆಯ ಸ್ವಯಂವರ ವಿವಾಹಕಲ್ಯಾಣಕಾರ್ಯ ಪರ್ಯಾಲೋಚನ ವಿರಾಮದೊಳ್, ಶ್ರೀವಿಜಯಂ ಮೊದಲಾಗೆ ವಿಶ್ವಂಭರಾಧೀಶ ತನೂಜ ಸಮಾಜಮಂ ಬರಿಸೆ (ಬರಿಸೆ) ಬಂದು ಶ್ರೀವಿಜಯಂ

ಮ|| ಗಗನಕ್ಷ್ಮಾಚರರೊಳ್ ಸ್ವಯಂವರದೊಳೀ ಸ್ತ್ರೀರತ್ನಮಂ ಕನ್ನೆಯಂ |
ಬಗೆಗೊಂಡಂತೊಳಗೊಳ್ವೆ ಪೆಮ್ಮೆಸುತಿರ್ಪುರ್ವೀಶ ರಿರ್ದಂತೆ ಕಂ ||
ತುಗೆ ಕನ್ಯೋತ್ತಮೆ ರಾಜಕೋಟಿ ತನಗಳ್ಕಿರ್ಪನ್ನ ಮಾಗಳ್ ಸುತಾ |
ರೆಗೆ ತಾರಾಧಿಪನಂತೆ ವಿಸ್ತರಿಸಿದಂ ಪ್ರಾಣೇಶ್ವರ ಪ್ರೀತಿಯಂ || ೨೩ ||

**ವ||** ಅಂತು ಪಿರಿಮಂ ವಿಭೂತಿಯೊಳ್ ಸ್ವಯಂವರದೊಳ್ ಶ್ರೀವಿಜಯಂ ಸುತಾರೆಯೊಳ್ ನೆರೆದಿಂ ಬೞಿಕ ಮಕಳಂಕಾಚಾರಸಾರ ನನೇಕ ಪಸದನ ಮುಡುಗೊರೆ ಸಹಿತಂ ಕಳಿಪೆ ಪೌದನ ಪುರಕ್ಕೆ ಪೋಗಿ ಸುಖಸಂಕಥಾ ವಿನೋದದಿ ನರಸುಗೆಯ್ಯುತ್ತುಮಿರೆ ಮತ್ತೊಂದು ದಿವಸ ಮಾಸ್ಥಾನ ಮಂಟಪ ಮಧ್ಯಸ್ಥಿತ ಚಾರು ಚಾಮೀಕರ ಮೃಗರಿಪು ವಿಷ್ಟರದೊಳ್ ತ್ರಿಪೃಷ್ಠತನಯಂ ಶ್ರೀವಿಜಯ ನಿರೆ:—

ಕಂ|| ತ್ರಿಜಗದ ಶಿರಿಕಂ ವಿದ್ಯಾ |
ಭಿಜಾತ ಗಂಧಂ ನಿಮಿತ್ತವಿದ ನಾಸಭೆಯೊಳ್ ||
ದ್ವಿಜ ನಱಿದಿಂತೆಂದ ನಮೋ |
ಘ ಜಿಹ್ವ ನೆಂಬೊಂ ಸಮಸ್ತ ವಸುಧಾಧಿಪನಂ || ೨೪ ||

**ವ||** ಇಂದಿಂಗೇೞು ದಿವಸದಂದಿಂಗೆ ಪೌದನಪುರಾಧೀಶ ಮಸ್ತಕದೊಳ್ ನಿರ್ಘಾತಾಪಾತಮಕ್ಕು ಮೆಂದಾದೇಶಂ ಗೆಯ್ವುದುಂ ತತ್ಸಭಾಪತಿಯು ನರ್ಮಸಚಿವರೊಳಱಿಮನುಕಾರನ್ಯೆಮಿತ್ತಿಕನಂ ಕಣ್ಣಂ ಕಿಡೆ ಜಡಿದು:—

ಕಂ|| ಅದು ನಿನ್ನಯ ತಲೆಯೊಳ್ ಬೀ |
ೞ್ವುದಕ್ಕೆ ಶುಭಮಕ್ಕೆ ಸಾರ್ವಭೌಮಂಗೆ ದಲೆಂ ||
ಬುದು ಮೆನ್ನಯ ತಲೆಯೊಳ್ ಸುರಿ |
ವುದು ಕಾಂಚನವೃಷ್ಟಿ ಮೆಚ್ಚಿ ನಿಮ್ಮ ಮಹೀಶಂ || ೨೫ ||

**ವ||** ಎಂದು ನಿಶ್ಶಂಕನುಂ ನಿಸ್ಸಹಾಯನುಮಾಗಿ ನುಡಿದಮೋಘಜಿಹ್ವನ ಸ್ಥಿರತ್ವಕ್ಕೆ ಮೆಚ್ಚಿ ನೀನಾರ್ಗೆನೆಂಜೆ ಯಿಲ್ಲಿರ್ದುಬಂದೆ ಯೆಂದರಸಂ ಬೆಸಗೊಂಡೊಡಾಂ ಸಿಂಧುವಿಷಯದ ಪದ್ಮಿನೀಖೇಟದ ವಿಪ್ರಪ್ರವರ ನಷ್ಟಾಂಗ ಮಹಾನಿಮಿತ್ತವಿಶಾರದಂ ವಿಶಾರದನೆಂಬೊಂ,ತದೀಯ ಪುತ್ರನೆ ನಾನಮೋಘ ಜಿಹ್ವ ನೆಂಬವ ನೆನೆ ತರ್ಜನ ನಿರತರಪ್ಪ ದುರ್ಜನರಂ ಬಾರಿಸಿ ಸನ್ಮಾನಪುರಸ್ಸರಂ ನೈಮಿತ್ತಕನಂ ಪೋಗ ಲ್ವೇೞ್ದು ಶ್ರೀವಿಜಯಂ ಮಂತ್ರಿಮಹತ್ತರ ಪುರೋಹಿತ ಪ್ರಭೃತಿಪ್ರಧಾನಪುರುಷರೊಳಾಳೋಚಿಸಿ ಮಹಾಶನಿರಕ್ಷೋಪಾಯಮಂ ಬೆಸಗೊಳೆ ಭೂಮಿಗೃಹಪ್ರವೇಶ ಮಂಜೂಷಿಜಯಾವಗಾಹಾದಿ ರಕ್ಷೋಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋಱೆ ಮಾಣೆ ಮೆಂದವರಂ ಮಾಣಿಸಿ ಮಣಿ ವಿಭೂಷಣನೆಂಬಮಾತ್ಯೋತ್ತಮ ನುಪಾಖ್ಯಾನಮನಿಂತೆಂದು ಪೇೞಲ್ತಗುಳ್ದಂ, ಒಂದು

ರ್ವತೋಪಕಂಠದೊಳ್ **ಕುಂಭಕಾರಕಟಕ**ಮೆಂಬುದು ಪೊಲಿಲುಂಟಲ್ಲಿ **ಚಂಡಕೌಶಿಕ**ನೆಂಬೊಂ ಪಾರ್ವಂ ದುರಾಚರಣಂ, ಆತನ ಭಾರ್ಯೆ **ಸೋಮಶ್ರೀ**ಯೆಂಬೊಳಾಕೆ ವ್ಯಂತರಾರಾಧನೆಗಳಿಂ **ಮುಂಡಕೌಶಿಕ**ನೆಂಬೊನಂ ಮಗನಂ ಪಡೆದಳಾಮಗಂ ಬಳೆಯೆ ವಳೆಯೆ ಮುಳಿದು ಕೊಲಲಿರ್ದ ಕುಂಭ ನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನ ನೊಯ್ದದ್ರಿ ಗುಹಾಂತರದೊಳ್ ಪ್ರಯತ್ನಂ ಬೆರಸಿರಿಸಿ ಕಾವುದು ಮಲ್ಲಿಯುಂ:—

ಕಂ|| ಪರಮಾರ್ಥತೆ ಹಿತಮಹಿತಮು |
ಪರಮಾರ್ಥತೆ ಯೆನ್ನದಾತ್ಮ ಜನಕಜ್ಞಾನ ||
ಸ್ಥಿರತೆಯೊಡನೊಡನೆ ಜರದಜ |
ಗರಗರಳ ಗತಾಯು ಮುಂಡಕೌಶಿಕ ನಱಿದಂ || ೨೬ ||

ಅದಱಿಂದಂ ಜೀವಕ್ಕ |
ಭ್ಯುದಯಮುನಭ್ಯುದಯ ಮೆಂಬಿದಂ ಧರ್ಮಾಧ ||
ರ್ಮದ ಮತಿಯೆ ಮಾಱ್ಕು ಮಜ್ಞಾ |
ನದೊಳಿನ್ನೇನೆಂಬುಪಾಯಮಂ ಕೆಯ್ಕೊಳ್ಳಾ || ೨೭ ||

ಪೌದನ ಪುರಾಧಿ ಪತ್ಯಮು |
ನಾದಕ್ಷನ....ಯಕ್ಷ ಬಿಂಬಕ್ಕಿತ್ತಿಂ ||
ತಾದರದಿ ನೇಱು ದೆವಸಮು |
ನಾದಿ ಜಿನಾಲಯದೊಳರ್ಚನಾದಿಕ ಸಹಿತಂ || ೨೮ ||

ವ|| ಇರೆಂದಿರಿಸೆ ಶಾಂತ್ಯಭಿಷೇಕಪುರಸ್ಸರಂ ಪೂಜಾವಿಧಾನಮಂ ಸಪ್ತವಾಸರಾವಸಾನಂಬರಂ ಮಾಡಲ್ತಗುಳ್ಚುದುಂ ಪರಿಪೂರ್ಣಾವಧಿ ದಿವಸ ಸಾಯಂತನ ಸಮಯದೊಳ್ ಶ್ರೀವಿಜಯನಿರ್ಪ ಚಿತ್ರ ಶಾಲೆಯೊಳಗಣ ಸಿಂಹಾಸನದೊಳಧಿಗತರಾಜ್ಯಾಭಿಷೇಕಕಿರೀಟಪಟ್ಟಬದ್ಧಮಪ್ಪ ವೈಶ್ರವಣ ಪ್ರತಿಮೆ ಶ್ರೀವಿಜಯನಾಸ್ಥಾನದೊಳಿರೆ:—

ಕಂ|| ತುಡೆ ಧನ್ವಿ ಸರಲ ನೊರ್ವಂ |
ಗೆಡೆವುಗೆ ಮತ್ತೊರ್ವನವನನದು ತಱಿವವೊಲೊ ||
ಳ್ಪುಡುಗದೆ ಯಕ್ಷಪ್ರತಿಮೆಯ |
ನಡುದಲೆಯೊಳ್ ಬಿಱ್ದುದಶನಿ ನುರ್ಗಪ್ಪಿನೆಗಂ || ೨೯ ||

ವ|| ಅಂತು ತಾಮ್ರಮಯ ಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱುವರಗು ಕಱುಗುವಂತೆ ಕಱಗಿ ಪೊನಲ್ವರಿಯೆ ಬಿಱ್ದಿಂದ್ರಾಯುಧಮಂ ಕಂಡು ಬೆಕ್ಕಸಂಬಟ್ಟು ಪದ್ಮಿನೀ ಖೇಡಂಬೆರಸು ಮಂಡಲಮ ಸಮೋಘ ಜಿಹ್ವಂಗೆ ಮಚ್ಚುಗೊಟ್ಟು ಶ್ರೀವಿಜಯಂ ನಿಜರಾಜ್ಯದೊಳ್ ನಿಂದು:—

ಹರಿಣೀವೃತ್ತಂ|| ಜನನಿ ತನಗಿತ್ತುದ್ಯದ್ವಿದ್ಯಾದ್ವಯಂ ಬೆಸಕೆಯ್ಯೆ ಕಾಂ |
ಚನಮಯ ವಿಮಾನಾಭ್ಯಾರೂಢಂ ಸುತಾರೆಯೊ ಳೊಪಳೊಳ್ ||
ಮನದೆಱಕದಿಂ ಪೋದಂ ಜ್ಯೋತಿರ್ವನಕ್ಕೆ ವಿಹಾರಿಸಲ್ |
ಜನಪತಿ ಪೆಱಂಗಿರ್ದೊಂದುತ್ಪಾತಮಂ ಸಚಿವೋತ್ತಮಂ || ೩೦ ||

